ಕನ್ನಡ ಕಾವ್ಯಮಾಲೆ—೪೫

# ಕಿಂಕಿಣಿ

ಕುವೆಂಪು



ಪ್ರಕಾಶಕರು
ಕಾವ್ಯಾಲಯ
ಮೈಸೂರು

ಶ್ರೀ

ಸಮರ್ಪಿತವಿಾ ಕನಕಕಿಂಕಿಣಿ

ಕವಿಯ

ಬದುಕಿನ ಸವಿಯ

ಸರ್ವಮಂಗಳೆಯ ಮೋಹಮಂದಿರೆಯ

ಹೇಮಾಂಗಿನಿಯ

ಪ್ರಣಯರಣಿತಂ ಪ್ರೇಮಸಿಂಜಿನಿ

ಝಣನ್ನೂಪುರಕೆ!

# ಅ ರಿ ಕೆ

ಇಲ್ಲಿನ ವಚನಕವನಗಳಲ್ಲಿ ಮೂರು ನಾಲ್ಕು ಮಾತ್ರ ಹಿಂದೆ 'ಪ್ರಬುದ್ಧ ಕರ್ಣಾಟಕ'ದಲ್ಲಿ ಅಚ್ಚಾಗಿದ್ದುವು. ಉಳಿದವುಗಳೆಲ್ಲ ಬೆಳಕು ಕಾಣುವುದು ಇದೇ ಮೊದಲು.

ಈ ಕೆಲವು ಅಚ್ಚಿನ ತಪ್ಪುಗಳನ್ನು ವಾಚಕರು ಗಮನಿಸಬೇಕಾಗಿ ಕೋರುತ್ತೇವೆ.

| ಪುಟ. | ಪಂಕ್ತಿ. | ತಪ್ಪು. | ಒಪ್ಪು. |
|---|---|---|---|
| ೧೦ | ೧೯ | ಬಿದರ್ | ಬದಿರ್ |
| ೧೩ | ೨ | ಮುಳುಗಿದ | ಮುಳುಗುವ |
| ೧೮ | | ಏಕೆಂದರೆ, ನೀನು ಎಲ್ಲೆಲ್ಲಿಯೂ ಇರುವೆ; ಎಲ್ಲದರಲ್ಲಿಯೂ ಇರುವೆ; ಎಲ್ಲವೂ ಆಗಿರುವೆ.— ಈ ಹೊಸ ವಾಕ್ಯವನ್ನು ೩ನೆಯ ಪ್ಯಾರಾ ಆಗಿ ಸೇರಿಸಿಕೊಂಡು ಓದಿ. | |
| ೨೫ | ೭ | ಎಲ್ಲವನು ಮರೆತಿರುವೆನು.—ಈ ವಾಕ್ಯವನ್ನು............ಒಂದನೂ ನಾನರಿಯೆ.— ಎಂಬುದರ ಮುಂದೆ ಸೇರಿಸಿಕೊಳ್ಳಿ. | |
| ೩೭ | ೭ | ಮುಗಿಲಿನ ಸುಳಿವಿಲ್ಲ. | ಮಳೆ ಮುಗಿಲಿನ ಸುಳಿವಿಲ್ಲ. |
| ೪೦ | ೯ | ಸಹಸ | ಸಹಸ್ರ |
| ೪೦ | ೧೩ | ಕರೆಯುವಂತ್ರೆ | ಕರೆಯುವಂತೆ |

ಈ ಪುಸ್ತಕವನ್ನು ಶೀಘ್ರವಾಗಿಯೂ ಚೆನ್ನಾಗಿಯೂ ಮುದ್ರಿಸಿ ಕೊಟ್ಟ ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸಿನ ಮಾಲೀಕರಾದ ಶ್ರೀ ಜಿ. ಎಚ್. ರಾಮರಾಯರ ಉಪಕಾರವನ್ನು ನೆನೆಯುತ್ತೇನೆ.

೧೮-೧೦-೪೬.
ಮೈಸೂರು.

**ಕೂಡಲಿ ಚಿದಂಬರಂ.**

# ವಿವರ

# ೧. ಕಿಂಕಿಣಿ

ಏಳುತಿದೆ ಗೋಧೂಳಿ ಮಲೆಯ ಕಣಿವೆಯಲಿ ಬೈಗುಬಾನಿಗೆ ಓಕುಳಿಯನೆರಚಿ.

ಹಳ್ಳಿಯ ಹಟ್ಟಿಗೆ ದನಕರು ಹಿಂತಿರುಗುವಂತೆಯೆ ಅದೊ ಮುಗಿಲ ದೇವಗೋವು ಕಾಲ್ನಡೆಯುತಿವೆ ಪಶ್ಚಿಮಾಚಲದ ಕಾನ್ಕೊಟ್ಟಿಗೆಗೆ.

ಮರ ಮರಗಳಲಿ ಗೊತ್ತುಕೂರುವ ಹಕ್ಕಿಗಳುಲಿಯೊಡನೆ ಕೇಳಿ ಬರುತಿದೆ ಆಲಿಸಾ ಗೋಕಂಠ ಕಿಂಕಿಣಿಯ ನಿಕ್ವಣನ ಪಂಕ್ತಿ.

ಲೋಕ ಲೋಕಂಗಳನು ತನ್ನ ತೊಟ್ಟಿಲೊಳಿಟ್ಟು ಜೋಗುಳವನುಲಿದು ತೂಗುತಿದೆ ಆ ಟಿಂ ಟಿಂ ಟಿಂಟಿಣಿಯ ಪಂತಿ!

ಭಾವ ವೀಚಿಗಳಳಿದು ಹೃದಯ ಸರೋವರ ನಿಸ್ತರಂಗ!
ಚಿಂತೆಯೂರ್ಮಿಗಳುಡುಗಿ ಚಿತ್ತವಾರಿಧಿ ಅಚಂಚಲ!
ಉಳಿದೆಲ್ಲ ಉಪಾಧಿಗಳನುಳಿದಾತ್ಮ ತಾನೆ ಕಿಂಕಿಣಿ!
ಆತ್ಮಸಂಧ್ಯಾಧೇನು ಕಿಂಕಿಣಿ!
ಅರ್ಥಮುಕ್ತ, ಭಾವದೀಪ್ತ, ಧ್ವನಿಪ್ರಚುರ, ಕೇಳ್ :
ಧ್ಯಾನಧೇನು ಕಿಂಕಿಣಿ!

# ೨. ಆಷಾಢ ಸೂರ್ಯೋದಯ

ಹೊಳೆವ ಚಿನ್ನದ ಗಿಂಡಿಯನು ಕೈಲಾಂತು ಬಾನ ಕರೆಯಲಿ ನಿಂತು ನಲಿಯುವ ಮೂಡಣದ ದೆಸೆವೆಣ್ಣು, ಮೆಲ್ಲನೆಚ್ಚರುವ ತಿರೆವೆಣ್ಣಿನ ಹಸುರುಡೆಯ ಮೇಲೆ ಚಿಮುಕಿಸುತ್ತಿಹಳು ಹೊನ್ನೀರಿನೋಕುಳಿಯ. ಇಬ್ಬನಿ ಕೋದ ನೆಲದ ಹಸುರು ತಣ್ಣನೆ ತೀಡುವ ತಂಗಾಳಿಯಲಿ ಅತ್ತ ಇತ್ತ ಒಲೆಯುತ್ತ ಹೊಂಬಿಸಿಲಲಿ ಜರತಾರಿಯಂತೆ ಮಿರುಗುತ್ತಿದೆ.

ಹಸುರ್‌ತಳಿರು ಮುದ್ದೆ ಮುದ್ದೆ ಕಿಕ್ಕಿರಿದ ಮರಗಳಲ್ಲಿ ಹುದುಗಿಕೊಂಡು ಹುಚ್ಚುಹಿಡಿದ ಕೋಗಿಲೆಗಳು ಹುಚ್ಚೆಲ್ಲ ಹಾಡಾಗಿ ಹರಿಯುವಂತೆ ಇಂಚರಗೈಯುತಿವೆ. ಕೋಗಿಲೆಗಳ ಇನಿಗೊರಲಿಂದ ಕಾಮನ ಬಿಲ್ಲುಗಳು ಹೊರಹೊಮ್ಮುತಿವೆ. ಕಿವಿ ಕಣ್ಣಾಗುತಿದೆ; ದನಿ ಬಣ್ಣವಾಗುತಿದೆ. ಭೂಮಿ ಆಕಾಶಗಳು ರೋಮಹರ್ಷಣದಿ ನಲಿಯುತ್ತಿವೆ.

ಮಳೆಯಿಂದ ತಿಳಿಯಾದ ಆಷಾಢದ ವಾಯುಮಂಡಲದಲಿ ನೀರೊಡಲ ಮೋಡಗಳು ವಿಕಟಾಕಾರವಾಗಿ ಸುತ್ತುತ್ತಿವೆ ಮಾಡಿದ ಮಾಡುವ ಕೆಲಸಗಳ ನಡುವೆ ಬೇಸರ ಕಳೆಯಲು ನಿಲ್ಲುವ ಕೆಲಸಗಾರನಂತೆ ಸುಮ್ಮನೆ ಕನಸಿನಲಿ ತೇಲುತ್ತಿವೆ. ಅವುಗಳಿಗೆ ಎದುರಾಗಿ ದೂರದಲಿ ಬೆಳ್ಳಕ್ಕಿ ಸಾಲ್ಗೊಂಡು ಹಾರುತ್ತಿವೆ, ಮುಕ್ತಿಗೇರುವ ಶುಭ್ರ ಜೀವರುಗಳಂತೆ, ಧವಳಪಂಕ್ತಿಯಲಿ.

ಹಸುರು ನೆಲದಲಿ ಹಾವಿನಂತೆ ಕೊಂಕಿ ಹರಿಯುವ ಕೆಂಮೂಳಿಯ ಹೆದ್ದಾರಿಯ ಬಳಿ, ಸಾಲ್ಗೊಂಡು ಬೆಳೆದಿರುವ ಬಿದರ್ ಮೆಳೆಗಳಲಿ, ನೆರೆದಿದೆ ಹಾಡುವ ಹಕ್ಕಿಗಳ ಪರಿಷತ್ತು. ಅವುಗಳೆಲ್ಲ ತುದಿಮೊದಲಿಲ್ಲದ ಬೇಸರವರಿಯದ ಅನಂತಗಾನದ ಆಲಾಪನೆಯಲ್ಲಿ ತೊಡಗಿವೆ. ಬಯಲ ಹಸುರಿನಲ್ಲಿ ಕುಪ್ಪಳಿಸುತಿವೆ ಪುರುಳಿಹಕ್ಕಿ.

ತುಂಬಿದ ಕೆರೆಯ ಕೆಮ್ಮಣ್ಣು ಬಣ್ಣದ ನೀರಿನ ಅಲೆಗಳು ಹಸುರಾದ ಅಂಚನು ಅಪ್ಪಳಿಸಿ ಸರಸವಾಡುತಿವೆ. ಬೆಳೆಯುತಿರುವ ಜೋಳದ ಹೊಲಗಳು ಉದಯ ವನಿತೆಯ ಕೈಬೀಸಿ ಕರೆಯುತಿವೆ.

ಸ್ವರ್ಗ ತಾನೀ ಪುಣ್ಯಸುಂದರ ಆಷಾಢ ಸೂರ್ಯೋದಯವನ್ನು

ಪ್ರಾತಃಸೂರ್ಯಬಿಂಬದ ಹೊಂಬಟ್ಟಲಲಿ ತುಂಬಿ ಭೂಮಿಗೆ ನಿವೇದಿಸಿದೆ. ಅದಕ್ಕೆ ಇದರಲ್ಲಿರುವ ಪ್ರೇಮದ ಸಾಕ್ಷಿಯಿದು. ಅದರನುರಾಗದ ಇದರು ಪಭೋಗದ ಪ್ರತಿನಿಧಿಯಿದು.

ಇದೋ, ನೀನು ಆಷಾಢ ಸೂರ್ಯೋದಯವನು ಚಿನ್ನದ ತಟ್ಟೆಯು ಲಿಟ್ಟು ನನಗೆ ದಾನಮಾಡಿರುವಂತೆ, ನಾನು ನನ್ನನು ನನ್ನ ಪ್ರೇಮದ ಲಿಟ್ಟು ನಿನಗೆ ನಿವೇದಿಸಿಕೊಳ್ಳುವೆ.

ನನ್ನದು ಇದೊಂದೆ ಬಿನ್ನಹ: ನನ್ನನೂ ಒಂದು ಆಷಾಢ ಸೂರ್ಯೋದಯವನ್ನಾಗಿ ಮಾಡಿ ಇನ್ನಾವುದಾದರೊಂದು ಲೋಕದ ಇಂತಹ ರಮಣೀಯ ಪ್ರಾತಃಕಾಲದ ಇಂತಹ ಅತುಲ ಐಶ್ವರ್ಯಕೆ ನಿವೇದಿಸುವೆಯಾ ?

# ೩. ಅನಂತಗಾನ

ಸನಾತನ ಅನಂತಗಾಯಕನೆ, ನಿನ್ನ ಗಾನವು ನಾನು. ಎನಿತೆನಿತೊ ಸಾರಿ, ಆವಾವ ಲೋಕಗಳಲ್ಲಿ, ಆವಾವ ರೀತಿಗಳಲ್ಲಿ ನೀನು ನನ್ನನು ಹಾಡಿದೆ; ದಣಿಯದೆ ಮರಳಿ ಮರಳಿ ಹಾಡುತ್ತಿರುವೆ!

ಸೂರ್ಯಚಂದ್ರರು ತಮ್ಮ ಜನನ ಕಾಲದಲಿ ಈ ಗಾನವನು ಕೇಳಿದರು. ನಕ್ಷತ್ರಗಳಿಗೆ ಇದುವೆ ಜೋಗುಳವಾಯಿತು. ಸಮಸ್ತ ವಿಶ್ವಕ್ಕು ಇದುವೆ ಚರಮಗೀತೆಯಾಗುವುದು.

ಮುಕ್ತಿಯಲ್ಲಿಯೂ ಇದೇ ಗಾನ, ಸ್ವರ್ಗದಲ್ಲಿಯೂ ಇದೇ ಗಾನ; ಭೂಮಿಯಲ್ಲಿಯೂ ಇದೇ ಗಾನ. ನೀನು ಹೋದೆಡೆಯಲ್ಲಿ, ನೀನು ಬಂದೆಡೆಯಲ್ಲಿ, ನೀನು ಇರುವೆಡೆಯಲ್ಲಿ ಎಲ್ಲಿಯೂ ಯಾವಾಗಲೂ ಇದೇ ಅಮರಗಾನ! ಸನಾತನ ಅನಂತಗಾಯಕನ ಚಿರನೂತನ ಅನಾದಿ ಗಾನ!

ಗಾನವಿಲ್ಲದೆ ಗಾಯಕನಿಲ್ಲ; ಗಾಯಕನಿಲ್ಲದೆ ಗಾನವಿಲ್ಲ. ನೀನು ಸರ್ವದಾ ಗಾನಮಾಡುತ್ತಿರುವುದು ಸೊನ್ನೆಯಾದೇನೆಂಬ ಬೆದರಿಕೆಯಿಂದಲೇ?

# ೪. ಸಂಜೆಯ ದಿಬ್ಬಣ

ಮುಳುಗಿದ ಸೂರ್ಯನ ಮಾಗಿದ ಕಾಂತಿ ಕಾಡಿನ ಹಸುರೆಲೆಗಳನ್ನು ಅಪ್ಪಿ ಮುದ್ದಿಸುತ್ತಿದೆ. ಬೈಗಿನ ಕೆಂಪು ಬಾನಿನೆಡೆಗೆ ತಲೆಯೆತ್ತಿ ನಿಂತಿರುವ ಬನಗಳ ಮಾಲೆಯನ್ನು ತೋಯಿಸಿ ಮಿಾಯಿಸುತ್ತಿದೆ. ಹಬ್ಬಿದ ಹೊಂಬೆಳಗಿನಲ್ಲಿ ನಾಡೆಲ್ಲ ಮನೋಹರವಾಗಿದೆ. ಮೊರೆಯುತ್ತ ಹರಿಯುವ ತೊರೆಯ ಬಳಿಯ ಕರಿಯ ಬಂಡೆಯ ಮೇಲೆ ಕುಳಿತ ನಾನು ಸೊಬಗಿನ ಮೆರವಣಿಗೆಯನ್ನು ನೋಡಿ ನೋಡಿ ಬೆರಗಾಗಿದ್ದೇನೆ.

ಗೂಡಿಗೆ ಹಾರುವ ಹಕ್ಕಿಗಳ ನೂರಾರು ಹಾಡುಗಳಿಂದ ಸಂಜೆಯು ಗಾಳಿವಟ್ಟೆ ತುಂಬಿತುಳುಕುತ್ತಿದೆ. ಹಾದಿಯ ದೂಳನೆಬ್ಬಿಸಿ ದೊಡ್ಡಿಗೆ ಹೋಗುವ ದನಗಳ ಹಿಂಡು ಕರುಗಳನು ಅಂಬಾ ಎಂದು ಕೂಗಿ ಕರೆಯುತ್ತಿದೆ. ಕಂಬಳಿಯನು ಹೆಗಲಮೇಲೆ ಹಾಕಿಕೊಂಡು ದನಗಾಹಿಗಳು ಮನೆಯೆಡೆಗೆ ಬೇಗಬೇಗನೆ ತೆರಳುತ್ತಿದಾರೆ. ಗೋಧೂಳೀ ಸಮಯವು ನಯನ ಮನೋಜ್ಞವಾಗಿದೆ. ಮಂಜುಳ ನಾದದಿಂದ ಪ್ರವಹಿಸುವ ತರಂಗಿಣಿಯ ತೀರದ ಶಿಲೆಯ ಮೇಲೆ ಕುಳಿತ ನಾನು ಸಂಜೆಯ ದಿಬ್ಬಣವ ನೋಡಿ ನೋಡಿ ಬೆರಗಾಗಿದ್ದೇನೆ.

ಗದ್ದೆಯಿಂದ ಮನೆಗೆ ಹೋಗುವ ನೇಗಿಲಯೋಗಿಗಳು ಹಾದಿಯ ಬಳಿ ಮರುಳನಂತೆ ಕುಳಿತ ನನ್ನನ್ನು ನೋಡಿ ವಿಸ್ಮಿತರಾಗಿದ್ದಾರೆ. ಮೂಡಿಬರುವ ಹುಣ್ಣಿಮೆಯ ತಿಂಗಳನ್ನು ಎದುರುಗೊಳ್ಳಲು ನಾನು ಕಾಯ್ದುಕೊಂಡಿರುವೆನೆಂಬುದನ್ನು ಅವರೆಂತರಿವರು ?

# ೫. ರವಿ-ಕವಿ

ಬೇಸಗೆಯ ನಡುಹಗಲಿಗೆ ಮತ್ತು ನೆತ್ತಿಗೇರಿದೆ. ನಾಡೆಲ್ಲ ಮೂರ್ಛೆಗೊಂಡಿದೆ.

ರಾಮರಸಪಾನಮಾಡಿರುವ ಕಬ್ಬಿಗನ ತಲೆಯಲ್ಲಿ ತಿರುಗುವ ಸವಿಯಾದ ಹಸುರು ಹೆಗ್ಗನಸುಗಳು ಭಾವದ ಬೇಗೆಗೆ ಮೈಮರೆಯು ವಂತೆ ಅರಣ್ಯಮಂಡಿತ ಪರ್ವತಶ್ರೇಣಿಗಳು ದಿಗಂತದಲ್ಲಿ ಧೀರವಾಗಿ ಮೇಲೆದ್ದು ಹಗಲ್‌ನಿದ್ದೆಗೈಯುತ್ತಿವೆ.

ಮಧುಪಾನದಿಂದ ಮೈಮರೆತು ಮುಗ್ಗರಿಸುವ ಕಾಮುಕನಂತೆ ಹುಚ್ಚೆದ್ದ ಹಗಲುಸಿರು ಬನಬನದ ಮರಗಳ ನಿರಿದಳಿರಲಿ ಹಾಯ್ದು ಬಟ್ಟೆಗೆಟ್ಟು ತೊಳಲುತ್ತಿದೆ.

ಕಾಮಳ್ಳಿ ಕಾಜಾಣ ಕೋಗಿಲೆ ಗಿಳಿ ಲಾವುಗೆ ಜೋರೆಗಳು ಎಲ್ಲ ಉರಿಬಿಸಿಲಿನಲಿ ಮಾತುಗೆಟ್ಟು ಮೌನವಾಗಿ ತಳಿರ ತಣ್ಣೆಳಲಿನಲಿ ಜೋಂಪಿಸಿ ಕನವರಿಸುತ್ತಿವೆ.

ಹೆಣೆದುಕೊಂಡ ಮರಗಳ ತಣ್ಣನೆಯ ನೆಳಲ್ಗತ್ತಲಲಿ ತುರುಗಳೆಲ್ಲ ಕುಗುರುತ್ತ ಮೆಲಕುಹಾಕುತ್ತಿವೆ; ದನಗಾಹಿ ಹೈದನು ತಂಗಾಳಿಯಲ್ಲಿ ನಿದ್ದೆಗದ್ದಿದಾನೆ.

ಹುಳಿಯಲದ್ದಿದ ಉಕ್ಕಿನ ಬಣ್ಣದ ನೀಲಿಯಾಗಸದಲಿ ಎಲ್ಲಿಯೋ ಒಂದೆರಡು ಕೆಲಸವಿಲ್ಲದ ತುಂಡುಮೋಡಗಳು ಕಾಲಹರಣ ಮಾಡುತ್ತಿವೆ.

ಎಲ್ಲವೂ ನಿಶ್ಚಲ; ಎಲ್ಲೆಲ್ಲಿಯೂ ನೀರವ; ವೈಶಾಖ ಮಧ್ಯಾಹ್ನದ ಕೈವಲ್ಯ ಸುಷುಪ್ತಿ!

ಅಲೆಯುವ ಬಿಕಾರಿಗಾಳಿಯ ಪದಹತಿಗೆ ನೆಲದ ಮೇಲೆ ದಟ್ಟಯಿಸಿರುವ ತರಗೆಲೆಗಳು ಮರ್ಮರನಾದಗೈಯುತ್ತಿವೆ, ನಿದ್ದೆಯಲ್ಲಿರುವ ಸದ್ದಿಲಿ ಬನವೆ ಕನಸಿನಲ್ಲಿ ಕನವರಿಸುವಂತೆ.

ಬೇರೆ ಯಾರೂ ಇಲ್ಲ. ರವಿ ಕವಿ ಇಬ್ಬರೆ ನೋಟಕರು. ಇಂತಹ ಎನಿತು ಹಗಲುಗಳು ಯುಗಯುಗಗಳ ಬೆಳಗಿವೆ!

# ೬. ಸಂಧ್ಯಾಚಿಂತನೆ

ಸಂಧ್ಯಾರಮಣಿ ಕೈಯಲ್ಲಿ ಹೊಂದಳಿಗೆಯನು ಹಿಡಿದು ಸ್ವರ್ಣ ಸಲಿಲವನು ಚಿಮುಕಿಸುತ, ಭೂವ್ಯಾಕಾಶಗಳಿಗೆ ರಂಗು ಬಳಿದು, ಬೆಟ್ಟ ಕಣಿವೆಗಳನು ಏರಿ ಇಳಿದು, ಹಕ್ಕಿಗಳನು ಗೂಡಿಗಟ್ಟುತ್ತ ಪೊದೆಗಳ ನಡುವೆ ಬಳುಕಿ ನಲಿದಾಡಿ ಬಂದಳು.

ಸ್ವರ್ಣ ಸಲಿಲದಿಂದ ತೊಯ್ದು ಪಶ್ಚಿಮ ದಿಗ್ಭಾಗದ ಮೇಘಮಾಲೆಗಳು ಕುಂಕುಮರಾಗದಿಂದ ಕೆಂಪಾದುವು; ವಿವಿಧ ವರ್ಣಚ್ಛಾಯೆಗಳನು ಪಡೆದು ಸುಂದರ ಸುಮನೋಹರವಾದುವು.

ಸಂಧ್ಯೆಯು ಬಣ್ಣದ ಜೋಗುಳದಿಂದ ಭೂದೇವಿಯ ಬಳಲಿದ ಕಣ್ಣೆವೆಗಳು ಒಯ್ಯನೆ ಮುಗುಳಿದುವು. ನಕ್ಷತ್ರಗಳು ಕಣ್ತೆರೆದು ಎಚ್ಚತ್ತುವು. ಸಂಧ್ಯೆಯ ಇಂದ್ರಜಾಲದಿಂದ ಮೂಡಿದ ಯಾಮಿನಿಯ ಮಾಯೆ ಮಹಿಯನ್ನು ಮುಸುಗಿತು.

ನಾನು ನಿನ್ನನೇ ಕುರಿತು ಚಿಂತಿಸುತ್ತ ಕತ್ತಲೆಗಿಳಿದೆ.

# ೭. ಸರ್ವಸಹಗಾಮಿ

ಮುಗಿಲಿನ ಮನೆಯಿಂದ ಎಡೆಬಿಡದೆ ಜಿನುಗುವ ಮಂಜಿನ ಸೋನೆಯು ಬೆಳ್ದೆರೆಯ ಮರೆಯ ಹಿಂಗಡೆಯಲ್ಲಿ ಮಾಗಿಯ ಉಷೆ ನಾಚಿ ಬೆಳ್ಪೇರಿಹಳು. ಇಬ್ಬನಿಯು ಬೆಳ್ಮಬ್ಬು ಮಲೆನಾಡಿನ ವನಪರ್ವತ ಕಂದರಗಳನ್ನು ತಬ್ಬಿರುವುದು.

ಉದಯ ಸೂರ್ಯದೇವನ ಜ್ಯೋತಿರ್ಮಯವಾದ ಸ್ವರ್ಣರಥದ ಶ್ವೇತ ಸಪ್ತಾಶ್ವಗಳು ಮಾಗಿಯ ಚಳಿಯಲ್ಲಿ ಮೈಯುಡುಗಿ ಮರವಟ್ಟು ಪೂರ್ವಾಚಲವ ಅಡರಲಾರದೆ ಸೋತು ಬೆಚ್ಚನೆ ಸುಯ್ದು ತಿಣುಕುತಿರುವುವು. ಅರುಣಸಾರಥಿ ಕುದುರೆಗಳನು ಬೋಳೈಸಿ ಚಪ್ಪರಿಸಿ ಚೋದಿಸಿ ಕೋಪದಿಂದ ಕೆಂಪೇರುತಿಹನು.

ಎಚ್ಚತ್ತ ವಿಹಂಗಮಗಳು ತರುಪರ್ಣಕುಟೀರಗಳಲ್ಲಿ ಹುದುಗಿ ಮಂಜು ಹಿಂಜರಿಯಲೆಂದು ಮೌನಧ್ಯಾನಾಸಕ್ತವಾಗಿಹವು.

ಇಬ್ಬನಿ ತಬ್ಬಿದ ಮರದೆಲೆಗಳಿಂದ ಹನಿ ತೊಟ್ಟಿಕ್ಕುತ್ತಿದೆ. ವಸಂತ ವಿಯೋಗದ ವಿರಹಯಾತನೆಯಿಂದ ಶ್ವೇತವಸನ ಧಾರಿಣಿಯಾಗಿ ಅವಕುಂಠಿತೆಯಾದ ವನರಮಣಿ ಕಂಬನಿಗರೆದು ನೀರವವಾಗಿ ರೋದಿಸುವಂತಿದೆ.

ಕಣಿವೆಯಲ್ಲಿರುವ ಹಳ್ಳಿಯ ಗುಡಿಸಲಿನಲ್ಲಿ ಪೇರೊಲೆಯ ಬೆಂಕಿ ಚಳಿಯೊಡನೆ ಹೋರಾಡುತ್ತಿದೆ. ಕೊರೆಯುವ ಕುಳಿರ್ಗಾಳಿಯಲ್ಲಿ ಸೆಡೆತು ನಡುಗಿ ಹಳ್ಳಿಗರು ಅಗ್ನಿದೇವನ ಮುಂದೆ ತಮ್ಮ ಪುಟ್ಟ ಸಂಸಾರಗಳ ಸಣ್ಣ ಕೊರತೆಗಳನು ಕುರಿತು ಅಹವಾಲು ಗೈಯುತಿದಾರೆ. ಅವರಿಗೂ ಜಗತ್ತಿಗೂ ನಡುವೆ ಸಹ್ಯಾದ್ರಿಯ ವನ ಪರ್ವತಶ್ರೇಣಿಗಳು ತತ್ತ್ವಜ್ಞಾನಿಗಳಂತೆ ಧೀರವಾಗಿ ನಿಂತಿವೆ!

ಒಲೆಯ ಬಳಿಯಲ್ಲಿ ಸಣ್ಣ ನಾಯಿಯೊಂದು ಕುಳಿತು ಎಲ್ಲವನ್ನೂ ತಿಳಿದುಕೊಳ್ಳುವಂತೆ ನಟಿಸುತ್ತಿದೆ. ಕ್ಷುದ್ರಕ್ಷುದ್ರತಮವಾದ ಶುನಕವೂ ನಿನ್ನ ದೃಷ್ಟಿಗೆ ಬಾಹಿರವಲ್ಲ! ಅನಂತ ಯಾತ್ರಿಕರ ಅನಂತ ಸಹಗಾಮಿಯೆ, ನಾಯಿಯ ಬಳಿಯಲಿ ನಿಂತು ಮುಗುಳುನಗೆ ಬೀರುವ

ನಿನ್ನನು ನೋಡಿ, ನಿನ್ನನು ಪಡೆದವನು ನಾನೊಬ್ಬನೇ ಎಂಬ ಹೆಮ್ಮೆ ನಾಚಿ ದೂರವಾದುದಯ್ಯ!

ಅಮಿತ ವೇಷಧಾರಿ, ಸುಗ್ರಿಯ ವೇಷದಂತೆ ಮಾಗಿಯ ವೇಷವೂ ನಿನಗೆ ಒಪ್ಪುತ್ತದೆ.

# ೮. ನೀನು ಪ್ರೇಮಮಯ

ಗುಡಿಯಲೇಕೆ ಅವರು ನಿನ್ನನು ಹುಡುಕಬಾರದು? ಗುಡಿಯಲೇಕೆ ಅವರು ನಿನ್ನನು ಪಡೆಯಬಾರದು? ಹುಡುಕಲಿ! ಪಡೆಯಲಿ!

ಎಲ್ಲಿಯಾದರೇನು? ಎಂತುಟಾದರೇನು? ನಿನ್ನನು ಹುಡುಕಿದರಾಯಿತು. ನಿನ್ನನು ಪಡೆದರಾಯಿತು. ಹುಡುಕುವುದು ಮುಖ್ಯವಲ್ಲವೆ? ಪಡೆಯುವುದು ಗುರಿಯಲ್ಲವೆ?

ಏಕೆಂದರೆ, ಎಲ್ಲ ಭಾವಗಳೂ ನೀನು; ಎಲ್ಲ ರಾಗಗಳೂ ನೀನು. ಸರೂಪಿಯೂ ನೀನು, ಅರೂಪಿಯೂ ನೀನು.

ಏಕೆಂದರೆ, ನಿನ್ನ ಅರಮನೆಗೆ ನೂರಾರು ಮಾರ್ಗಗಳಿವೆ, ನೂರಾರು ಹೆಬ್ಬಾಗಿಲುಗಳಿವೆ.

ಏಕೆಂದರೆ, ನೀನು ಎಲ್ಲ ಕರ್ಮಗಳ ಆದರ್ಶ; ಎಲ್ಲ ಸಂಸ್ಕಾರಗಳ ಆದರ್ಶ; ಎಲ್ಲ ಭಾವಗಳ ಆದರ್ಶ; ಎಲ್ಲ ಆತ್ಮಗಳ ಆದರ್ಶ!

ಏಕೆಂದರೆ, ನೀನು ಪ್ರೇಮಮಯ!

# ೯. ಭಗವನ್ ಮೌನ

ಬಾನಿನಿಂದ ಮುದ್ದು ಬೆಳ್ದಿಂಗಳು ಗರಿಗೆದರಿ ಬುವಿಗಿಳಿದು ತಬ್ಬಿ ಹಬ್ಬಿ ಮಲಗಿತ್ತು, ಹಸುರು ಮೊಟ್ಟೆಯ ಮೇಲೆ ಕಾವು ಕೂರುವ ಚಿನ್ನದ ಹಕ್ಕಿಯಂತೆ.

ಸ್ವರ್ಗ ಮರ್ತ್ಯಗಳೆರಡೂ ಪರಸ್ಪರ ಆಲಿಂಗನ ಚುಂಬನಗಳಿಂದ ಆನಂದ ಸಮಾಧಿಯಲ್ಲಿದ್ದುವು.

ಜ್ಯೋತ್ಸ್ನಾಮಯಿಯಾದ ಯಾಮಿನಿಯ ಪ್ರಶಾಂತ ನೀಲಾಕಾಶದಲ್ಲಿ ಸಪ್ತರ್ಷಿ ಮಂಡಲ ಮೌನವಾಗಿ ಮಿಣುಕುತಿತ್ತು. ಇತರ ತಾರೆಗಳು ಅಲ್ಲಲ್ಲಿ ತಮ್ಮ ದೀನಧರ್ಮಜ್ಯೋತಿಯನ್ನು ಬೀರುತ್ತಿದ್ದುವು. ಜೊನ್ನದಲ್ಲಿ ಮಿಂದ ತೆಳುಬೆಳ್ಮುಗಿಲು ನೀಲಿಗೆದುರಾಗಿ ತೊಳಲಿ ತೇಲಿದ್ದುವು.

ತೀಡುವ ತಂಗಾಳಿಯ ಮುತ್ತುಗಳಿಂದ ಸರಸಿಯಾದ ಸರೋವರದ ಕಿರುದೆರೆಗಳು ಹಸುರು ದಡದೊಡನೆ ಗಳಪಿದುವು. ಪವನ ಹತಿಗೆ ತಲೆದೂಗುತ್ತಿದ್ದ ಜೊಂಡುಹುಲ್ಲಿನಲ್ಲಿ ನೂರಾರು ಕ್ರಿಮಿಕೀಟ ಮಂಡೂಕಗಳು ವಿಕಟ ಕರ್ಕಶವಾಗಿ ಧ್ವನಿಮಾಡಿದುವು. ಕೆರೆಯಂಚಿಗೆ ಅನತಿದೂರದಲ್ಲಿದ್ದ ವಿದ್ಯುದ್ ದೀಪಗಳು ನೀರಿನಲ್ಲಿ ನೀಳವಾಗಿ ನಿಮಿರಿ ನಲಿನಲಿದು ರಂಜಿಸಿದುವು. ತೆರೆತೆರೆಯಲ್ಲಿ ಹಬ್ಬಿದ ತಿಂಗಳುಬೆಳಕು ಒಂದೆಡೆ ದಟ್ಟೈಯಿಸಿ, ತಣ್ಗದಿರನನ್ನು ಕರಗಿಸಿ ತಗಡುಗೈದಂತೆ, ಕೋಟ್ಯನುಕೋಟಿ ಮಿಂಚುಂಬುಳುಗಳನು ಕೋದು ರನ್ನಗಂಬಳಿ ಮಾಡಿದಂತೆ ರಾರಾಜಿಸಿತ್ತು.

ದೂರ ಹೆದ್ದಾರಿಯಲ್ಲಿ ಎತ್ತಿನ ಗಾಡಿಯೊಂದು ಗಡಗಡ ಕಟಕಟ ರಣಿತದಿಂದ ಹಳ್ಳಿಗೆ ಹೋಗುತ್ತಿತ್ತು.

ಕೆರೆಯ ಹಸುರಂಚಿನ ಮೆತ್ತೆಯ ಮೇಲೆ ಕುಳಿತು ನಾವಿಬ್ಬರೂ ನೋಡಿದೆವು ; ಸುಮ್ಮನೆ ನೋಡಿದೆವು. ಒಬ್ಬರೂ ಒಂದು ಮಾತಾಡಲಿಲ್ಲ.

ನೋಟ ಮಾತಿನ ಮೇರೆ ಮೀರಿತ್ತು.

ಅಸಂಖ್ಯ ರಾಗಾನುರಾಗಗಳ ವಿಶ್ವವರ್ಣಶಿಲ್ಪಿಯೆ ನಿನ್ನ ಇಂದ್ರಜಾಲದ ಸೌಂದರ್ಯವನ್ನು ಮಾತಿಲ್ಲದೆ ಅನುಭವಿಸುವುದನು ನಮಗೆ ಕಲಿಸು.

# ೧೦. ದಿವ್ಯ ಮಿಥ್ಯೆ

ನಾನು, ನಾನು, ನಾನು ! ನನ್ನದು, ನನ್ನದು, ನನ್ನದು! ಎಂತಹ ಸವಿಮಾತುಗಳವು ! ಎಂತಹ ಮುದ್ದಿನ ಮಾತದು " ನಾನು ! " ಎಂತಹ ಸವಿಸುಳ್ಳದು " ನನ್ನದು ! " ?

" ನಾನು " ಸೃಷ್ಟಿಗೆ ಕಾರಣ. " ನನ್ನದು " ಸ್ಥಿತಿಗೆ ಕಾರಣ. '' ನಾನು '' '' ನನ್ನದು '' ಅಳಿದು '' ನೀನು '' '' ನಿನ್ನದು '' ಆಗುವುದೆ ಲಯಕ್ಕೆ ಕಾರಣ.

" ನಾನು " ಎಂಬುದು " ನೀನು " ಎಂದಾಗಿ, ನಾನೆ ನೀನಾಗಿ, ಮಾತು ಮೌನವಾಗಿ, ತನಗೆ ತಾನಾಗಿ, ಕಡೆಗೆಲ್ಲವೂ ಬರಿದಾಗಿ, ಇದು ಅದಾಗಿ ಹೋಗುವುದು !

ಮಾಯಾವಿ, ಇಂತಹ ಮಹಾಘನ ವಿಶ್ವವನು ಎಂತಹ ಸವಿಸುಳ್ಳಿನಲಿ ಕೆತ್ತಿರುವೆ !

# ೧೧. ಒಡನಾಡಿ

ಬಿಟ್ಟ ಬಟ್ಟೆಯ ದಾರಿಹೋಕನೆ, ನೀನೆನ್ನ ಬಳಿಯೊಳಿರುವನ್ನೆವರಂ ನನಗೆ ಬೇಸರವಿಲ್ಲ; ನೀನೆನ್ನ ಕೂಡೆ ಬರುವನ್ನೆವರಂ ನನಗಿನಿತು ಅಳುಕಿಲ್ಲ; ನೆಚ್ಚನೀಯುತ ನೀನು ನುಡಿಯುತಿರುವನ್ನೆವರಂ ನನಗೆ ಬಳಲಿಕೆಯಿಲ್ಲ. ನಡೆಯುವೆನು; ಮುಂಬರಿವೆನು; ನಿನ್ನನು ನೆಚ್ಚಿ ದಾರಿಸಾಗಿಸುವೆನು.

ದಾರಿಯ ಪರಿಚಯವಿಲ್ಲ; ಸೇರುವ ಗುರಿಯ ಪರಿಚಯವಿಲ್ಲ. ನಿನ್ನ ಪರಿಚಯವೊಂದೆ ನನಗೆಲ್ಲದರ ಪರಿಚಯ.

ಕಡಿದಾದ ಬೆಟ್ಟಗಳಿರೆ ಕೈಹಿಡಿದು ಮೇಲೇರಿಸು. ಆಳವಾದ ಕಂದರಗಳಿರೆ ಮೆಲ್ಲಗೆ ಕೆಳಗಿಳಿಸು. ಮುಳ್ಳು ಕೆಸರುಗಳಿರೆ ಮೇಲೆತ್ತಿ ದಾಟಿಸು. ಮರುಭೂಮಿಗಳಿರೆ ಹಾಡಿ ಹುರಿದುಂಬಿಸು.

ಯಾರು ತುಳಿಯದ ಹಾದಿಯಲಿ ತವರೂರಿಗೆ ಹೊರಟಿರುವೆನು. ನನ್ನದು ಸಿಡಿಲು ಮಿಂಚುಗಳ ಹಾದಿ. ಬೇಡವೆಂಬರೆ ಹಲರು; ನುಗ್ಗು ಎಂಬರು ಎಲ್ಲಿಯೊ ಕೆಲರು.

ಒಂಟಿಗರ ಸಂಗಡಿಗನೆ, ಸಾಹಸಿಗಳೊಡನಾಡಿಯೆ, ಕೈಹಿಡಿದು ಕಡೆಹಾಯಿಸೆನ್ನ.

# ೧೨. ಸದಸ್ಯ ನಿರಪೇಕ್ಷಣೀಯ

ಜನ ನೋಡದ ಮಲೆನಾಡಿನ ಕಾಡಿನ ಮೂಲೆಯ ಒಂದು ಕಿರು ಹೊದರಿನಲಿ ಮೂಡಿ, ತೆಂಗಾಳಿಯಲಿ ತಳಿರ ಹಿಂದೆ ಬಳುಕಿ ನಲಿದು, ನಾಚುವ ಚೆನ್ನೆಯ ಚೆಲ್ವಿನ ಕೆನ್ನೆಯಲಿ ಸುಳಿವ ಬೆಳ್ಗೆಂಪಿನ ಬಣ್ಣದ ಹೂವಿನಂತೆ ನಮ್ರ ಗರ್ವದಿಂದ ಬಾಳುವುದನು ನನಗೆ ಕಲಿಸು, ಓ ಸೌಂದರ್ಯ ಯೋಗಿ!

ಮಹತ್ತಾದ ಸಹ್ಯಾದ್ರಿಶ್ರೇಣಿಗಳ ಅಜ್ಞಾತ ಶಿಖರವೊಂದರಲಿ ತಲೆ ಯೆತ್ತಿ ನಿಂತಿರುವ ಕರಿಯ ಹೆಬ್ಬಂಡೆಯ ಮೇಲೆ, ಬಿತ್ತರದ ಬಾನಿಗೆದು ರಾಗಿ, ಮಹಾವಿಶ್ವಸಮ್ಮುಖದಲಿ ಕಾಳೊಂದನು ಕಚ್ಚಿಕೊಂಡು ಎಡೆ ಬಿಡದೆ ದುಡಿಯುತ್ತ ಹರಿಯುವ ಸಣ್ಣ ಇರುವೆಯೊಂದರಂತೆ ಉತ್ಸಾಹ ದಿಂದ ಕೆಲಸಮಾಡುವುದನು ನನಗೆ ಕಲಿಸು, ಓ ಕರ್ಮ ಯೋಗಿ!

ಮಲೆನಾಡಿನ ನಿರ್ಜನ ನೀರವ ವಸಂತ ವನಗಳ ನಡುವೆ ಪ್ರಭಾತ ಸಮಯದಲಿ ಹೆಮ್ಮರವೊಂದರ ನಡುನೆತ್ತಿಯ ಮೇಲೆ ಕುಳಿತು ಕೊಂಡು ಸುಮನೋಹರವಾಗಿ ರಾಗಾಲಾಪನೆ ಮಾಡುತ್ತ ಗಾನಗೈ ಯುವ ಕಾಜಾಣ ಪಕ್ಷಿಯಂತೆ ಸದಸ್ಯ ನಿರಪೇಕ್ಷಣೀಯವಾದ ಆತ್ಮಾನಂದ ದಿಂದ ಹಾಡುವುದನು ಕಲಿಸೆನಗೆ, ಓ ಸ್ವರಯೋಗಿ!

ಶ್ರೀರಾಮಚಂದ್ರನ ಮಹಾಸೇತು ಮುಂದುವರಿದಂತೆ ನೋಡಿ ನೋಡಿ ಹಿಗ್ಗಿದ ಪುಟ್ಟ ಅಳಿಲಿನ ಹೃದಯದ ಮಹಾನ್‌ಮಹಿಮೆಯ ನೆನಗೆ ಕಲಿಸು; ಓ ಯೋಗೀಂದ್ರ ಯೋಗಿ!

# ೧೩. ಮುಗುಳುನಗೆಯೆಲ್ಲಿ?

ಬೆಳಗಿನಿಂದ ಬೈಗಿನವರೆಗೂ ಆಟವಾಡಿ ಕುಣಿದು ದಣಿದು, ಸಂಜೆಗತ್ತಲಿಳಿದು ಬರಲು, ನಾನು ನಿನ್ನೆಡೆಗೆ ಮರಳಿದಾಗ ನೀನೇನು ಕೇಳುವೆ?

ಸಾಲವೆನಿತಾಯಿತೆಂದು ಕೇಳುವೆಯೇನು?
ಸಂಪಾದನೆ ಎನಿತೆಂದು ಕೇಳುವೆಯೇನು?
ಬಟ್ಟೆಯೇಕೆ ಹರಿಯಿತೆಂದು ಕೇಳುವೆಯೇನು?
ಮೈಯೆಲ್ಲ ಮಣ್ಣಾಯಿತೇಕೆಂಬೆಯೇನು?
ಪುಣ್ಯಪಾಪಗಳ ಆಯವ್ಯಯವ ಕೇಳುವೆಯೇನು?
ಇಲ್ಲ, ಎಂದಿಗೂ ಇಲ್ಲ!

ನಾನು ನಗದಿದ್ದರೆ ಮಾತ್ರ ನೀನು ಕೇಳುವೆ: "ಮಗುವೆ, ಬೆಳಗಾಗ ನೀನು ಆಟಕ್ಕೆ ಹೊರಟಾಗ ನಿನ್ನ ಮುದ್ದು ಮೊಗದ ಮೇಲೆ ನಾ ಮುತ್ತಿಟ್ಟು ತೊಡಿಸಿದ ಆ ಚೆಲುವಿನ ಮುಗುಳುನಗೆಯೆಲ್ಲಿ?"

ಅದಕಾಗಿಯೆ, ಆಟದಲಿ ಎಲ್ಲವನು ತೊರೆದಿರುವ ನಾನು, ನಿನ್ನ ಮುದ್ದು ಮುತ್ತಿನ ಮುಗುಳುನಗೆಯನು ಮಾತ್ರ ಮೊಗದಿಂದುರುಳದಂತೆ ಬಿಡದೆ ಹಿಡಿದಿರುವೆನು.

# ೧೪. ಅಶ್ರು ಅವಿನಶ್ವರ !

ಮುಡಿದರವರು, ಹೋದರಿವರು, ಇವನು ಅಳಸೇಕೆ? ಎಂದು ಅವರಿವರಾಡಿಕೊಂಬರು.

ಅಕ್ಕರೆ ಇಲ್ಲದವನು, ಕಂಬನಿಯಿಲ್ಲದವನು, ಕಲ್ಲೆದೆಯವನು, ಎಂದೆಲ್ಲ ನುಡಿಯುವರು.

ಒಲವಿರುವುದೆನಗೆ, ಕಣ್ಣೀರಿಹುದೆನಗೆ, ಮೆಲ್ಲೆದೆಯಿಹುದೆನಗೆ.

ಕಂಬನಿಯೆಲ್ಲವನು ನನ್ನ ಎದೆದಾವರೆಯೆಲೆಯಲಿ ನಿನಗಾಗಿ ತುಂಬಿರುವೆನು.

ಕಾಲಾನಂತರದಲಿ ಒಂದೊಂದು ಕಂಬನಿಯೂ ಒಂದೊಂದು ಸವಿಗಾನವಾಗಿ ಹೊರಹೊಮ್ಮಲು ಅವುಗಳನೆಲ್ಲ ನಿನ್ನ ಚರಣತಲದಲಿ ನಿವೇದಿಸಿ ಸುಮ್ಮನಾಗುವೆನು.

ಅವರ ಕಂಬನಿಗಳೆಲ್ಲ ನಶ್ವರ; ನಿನ್ನ ಚರಣತಲದಲ್ಲಿ ಗಾನಮಣಿಗಳಾಗಿ ನಲಿಯುವ ನನ್ನ ಅಶ್ರು ಅವಿನಶ್ವರ !

# ೧೫ ಜನ್ಮಾಂತರ

ನಿನ್ನೊಡಗೂಡಿ ನಾನೆಂದು ಪಯಣ ಹೊರಟೆನೋ ನಾನರಿಯೆ; ಯಾವ ಕಜ್ಜವ ಕೈಗೂಡಿಸಲು ಹೊರಟೆನೋ ನಾನರಿಯೆ. ನಿನ್ನೊಡನೆ ಎನಿತು ಊರು ಹಳ್ಳಿಗಳನು ದಾಂಟಿ ಬಂದೆನೋ ನಾನರಿಯೆ. ಎಲ್ಲವನು ಮರೆತಿರುವೆನು.

ದಾರಿಯೊಳು ಆರಾರ ಗೆಳೆತನವ ಬೆಳೆಸಿ, ಆರಾರನೊಲಿದು, ಆರಾರಿಗೆ ಆವಾವ ಹಾಡುಗಳನು ಹಾಡಿದೆನೋ, ಒಂದನೂ ನಾನರಿಯೆ.

ಅಂತೂ ನಿನ್ನೊಡನೆ ಬಹುದೂರ ನಡೆದು ಬಂದಿರಬೇಕು; ಪಯಣದಲಿ ನಿಡುದಾರಿ ಕಳೆದಿರಬೇಕು.

ಪಯಣದಲಿ ಎನಿತು ಹಗಲಿರುಳುಗಳು ಹೊಳೆದಳಿದು ಹೋದುವೋ ನಾನರಿಯೆ.

ಏಕೆಂದರೆ, ದಾರಿಯೆಡೆ ಬಳಲಿ ಮಲಗಿರಲು, ಬಿಟ್ಟು ಬಂದ ನೋಟಗಳೆಲ್ಲ ಕನಸಿನಲಿ ಸುಳಿಯುವುವು; ಹಿಂದೆ ಹಾಡಿದ ಹಾಡುಗಳೆಲ್ಲ ಮರಳಿ ಮೊರೆಯುವುವು. ಮರೆತ ಮೊಗಗಳು ಮರಳಿ ಮೈದೋರುವುವು.

ನೀನೇಕೆ ಮೌನವಾಗಿರುವೆ; ನೀನೂ ನನ್ನಂತೆ ಎಲ್ಲವನು ಮರೆತು ಬಿಟ್ಟಿಹೆಯೇನು?

# ೧೬. ನನ್ನ ದೊರೆಯೆ, ಬಾ ನನ್ನೆದೆಗೆ

ತೊಳೆದಿಟ್ಟ ನೀಲಿಯ ಗಾಜಿನಂದದಿ ಬಾನು ಮೋರೆಯಿಲ್ಲದೆ ಹಬ್ಬಿದೆ.

ನಟ್ಟನಡುವೆ ತಿಳಿಬೆಳುದಿಂಗಳನು ಸೂಸಿ ಚೆಲುವಿನರಸಾಗಿ ತಿಂಗಳು ಮೆರೆಯುತ್ತಿದೆ.

ಬೆಳ್ದಿಂಗಳ ಸೊನೆಯಿಂದ ತಿರೆಯೆಲ್ಲ ತೊಯ್ದು ಹೋಗಿದೆ; ತುಂಬಿತುಳುಕುತ್ತಿದೆ ಜಗತ್ತು.

ಶೀತಲ ಜ್ಯೋತ್ಸ್ನಾ ಜ್ಯೋತಿಯಲ್ಲಿ ನಕ್ಷತ್ರಗಳೂ ನಾಚಿ ಕಣ್ಮರೆಯಾದಂತಿವೆ.

ಎಲ್ಲ ನೀರವ; ಎಲ್ಲ ನಿಶ್ಚಲ.

ಕಾಡಿಗೆ ನಿದ್ದೆ; ನಾಡಿಗೆ ನಿದ್ದೆ; ಬೆಟ್ಟಕೆ ನಿದ್ದೆ; ಕೊಳಕ್ಕೆ ನಿದ್ದೆ.

ನಿನ್ನ ಬರವನೆ ಹಾರೈಸಿ ನಾನೊಬ್ಬಳೆ ಎಚ್ಚತ್ತಿರುವೆ.

ಬಾ ನನ್ನ ದೊರೆಯೆ, ಬಾ ನನ್ನೆದೆಗೆ.

ನೀನಿರದಿರೆ ಸೊಬಗು ಸುಡುಗಾಡಲ್ತೆ?

ನೀನು ಬರೆ ಸುಡುಗಾಡು ಸೊಬಗುವೀಡಲ್ತೆ?

ನಾಡಿನ ನಿದ್ದೆ ನನ್ನ ಕಣ್ಣಿಗೈತಹ ಮುನ್ನ, ಕಾಡು ಬೆಟ್ಟಗಳಂತೆ ನಾನೂ ಕಣ್ಣು ಮುಚ್ಚುವ ಮುನ್ನ, ಸರೋವರದ ಮೂರ್ಛೆ ನನ್ನನು ಆವರಿಸುವ ಮುನ್ನ, ಬೆಳ್ದಿಂಗಳು ಬಾಡುವ ಮುನ್ನ, ನನ್ನ ದೊರೆಯೆ, ಬಾ ನನ್ನೆದೆಗೆ!

# ೧೭. ನಾನು ಮುರಾರಿ !

ಈ ದೀರ್ಘಯಾತ್ರೆ ಎಂದಿಗೆ ಮುಗಿಯುವುದೊ ನಾನರಿಯೆ ಆ ಪುಣ್ಯಕ್ಷೇತ್ರ ಎಂದಿಗೆ ದೊರೆಯುವುದೊ ನಾನರಿಯೆ. ಅಂತೂ ನಾನೇನೊ ಯಾತ್ರೆ ಹೊರಟಿರುವೆ. ತಪ್ಪದೆ ಹಾದಿ ನಡೆಯುತ್ತಿರುವೆ. ಎಲ್ಲಿಯೂ ನಿಲ್ಲದೆಯೆ, ಎತ್ತಲೂ ನೋಡದೆಯೆ ಹಾದಿ ನಡೆಯುತ್ತಿರುವೆ.

ನಾನು ಹೊರಟಿರುವ ಈ ಹಾದಿಯಲ್ಲಿ ಹೊರಟಿರುವರೊಬ್ಬರನೂ ನಾ ಕಾಣೆ. ಅರೆ ಹಾದಿ ಬಂದಿರುವೆ. ಜೊತೆಗಾರರಾರಿಲ್ಲ. ಒಬ್ಬನೇ, ನಾನೊಬ್ಬನೇ ಹೋಗುತಿರುವೆ.

ಯಾತ್ರೆ ಹೊರಟಾಗ ಎನಿತೆನಿತೊ ಗೆಳೆಯರನು ಜೊತೆಗಾರ ರೆಂದು ಬಯಸಿದೆ. ಆದರೀಗ ತಿಳಿದೆ : ನನಗೆ ನೀನಲ್ಲದೆ ಬೇರೆ ಸಂಗ ಡಿಗರಾರಿಲ್ಲ.

ಬರುವೆವೆಂದವರಲ್ಲಿ ಕೆಲರು ಬರಲಿಲ್ಲ. ಬಂದ ಕೆಲವರು ಹಿಂದಿ ರುಗಿದರು. ಕೆಲರು ಕಾಡನು ಕಂಡು, ಕೆಲರು ಬೆಟ್ಟವ ಕಂಡು, ಕೆಲರು ಮರುಭೂಮಿಯನು ಕಂಡು, ಕೆಲರು ತುಂಬು ಹೊಳೆಯನು ಕಂಡು ಹೆದರಿ ಹಿಂದಿರುಗಿದರು.

ಮತ್ತೆ ಕೆಲರಿಗೆ ಗುರಿಯ ನೆಚ್ಚಳಿದು ಹೋಯ್ತು. ಮರುಳ್ಗಾಡ ಕಂಡೊಡನೆ ಹಿಂದುಳಿದ ಹಸುರುನೆಲವನು ನೆನೆದು ನೆವಗಳನು ತಂದೊಡ್ಡಿ ಕವಲೊಡೆದ ಹಾದಿಯಲಿ ಕಣ್ಮರೆಯಾದರು.

ಎಳೆ ಬಿಸಿಲು ಒಯ್ಯೊಯ್ಯನೆ ಬೆಳೆ ಬಿಸಿಲಾಗಿ ನಡು ಹಗಲಾಗಿ ಉರಿ ಬಿಸಿಲೇರುತಿರೆ ನಾನೊಬ್ಬನೇ ಹಗಲ ಮೂಟೆಯ ಹೊತ್ತು ತಲೆ ಬಾಗಿ ಸಾಗಿದೆ. ನನ್ನೆಡೆಯಲಿ ಇದ್ದವರೆಂದರೆ ನೀನು, ನನ್ನ ನೆಳಲು.

ಮೌನ ನಿರ್ಜನತೆಗಳ ಭೀಷಣ ಗುರುಭಾರವನು ಪರಿಹರಿಸಿ ಕೊಳ್ಳಲು ಹಾಡಿ **ಹಾಡಿ** ಮುಂದೆ ಸಾಗಿದೆ.

ಕೆಲವು ಸಾರಿ ಹಿಂದೆ ಯಾರಾದರೂ ನನ್ನ ಹಾದಿಯಲಿ ಹೊರಟ ಜೊತೆಗಾರರು ಬರುವರೇನೊ ಎಂದು ಹಾರೈಸಿ ಮರದ ನೆರಳಲಿ ಕುಳಿತು ಕಾದೆ. ಯಾರೂ ಬಾರದಿರಲು ನಿಡುಸುಯ್ದು ಅಲ್ಲಿಂದೆದ್ದು ನನ್ನ ಹಾದಿ ಯಲಿ ನನಗಿಂತಲೂ ಮುಂದೆ ಹೊರಟ ಜೊತೆಗಾರರು ಸಿಗುವರೇನೊ

ಎಂದು ಬಯಸಿ ಬೇಗ ಬೇಗನೆ ಬಿಸಿಲನೆಣಿಸದೆ ಓಡಿದೆ. ಗುಡ್ಡ ಬೆಟ್ಟ ಕಣಿವೆಗಳ ನಡುನಡುವೆ ಸುತ್ತಿ ಬಳುಕಿ ಹೋಗಿದ್ದ ಆ ಕೊನೆಗಾಣದ ದಾರಿಯಲ್ಲಿ ಯಾರೊಬ್ಬರೂ ಕಣ್ಣಿಗೆ ಕಾಣದಿರಲು ನಿರಾಶೆಯಿಂದ ಕಾಲು ಸೋತು ಮೆಲ್ಲನೆ ಹರಿಯ ತೊಡಗಿದೆ.

ನಾನು ಹಿಡಿದಿದ್ದು ವಕ್ರಪಥವೊ ? ಅಥವಾ ವಿಚಿತ್ರ ವೀಥಿಯೊ ? ಅಥವಾ ನನ್ನ ಭೈರವ ಯಾತ್ರೆ ಇನ್ನುಳಿದವರಿಗಸದಳವೊ ?

ನನ್ನದು ಕಾವಿಯ ದಾರಿಯಲ್ಲ; ಸಂಸಾರಿಯ ದಾರಿಯಲ್ಲ. ನನ್ನದು ಮೂರನೆ ದಾರಿ : ನಾನು ಮುರಾರಿ !

# ೧೮. ಮಂಜಿನ ಅವತಾರ

ಮಾಗಿಯ ಬಿಳಿಮಂಜು ಹಿಟ್ಟಿನ ಸೋನೆಯಂತೆ ದಟ್ಟವಾಗಿ ಬೀಳುತ್ತಿದೆ. ಆಕಾಶ ಮುಸುಗುಹಾಕಿಕೊಂಡು ಭೂಮಿಗೆ ಬಂದಿದೆ; ಒಂದೇ ಮಾರು ದೂರದಲ್ಲಿ ಸರೋವರದ ಮೇಲೆ ನಿಂತಿದೆ!

ಕಿರುಗೊಳ ಅನಂತ ಕಡಲಾಗಿದೆ!

ತಿರೆಯ ಮೇಲೆ ಕನಸಿನ ಪರದೆ ಬಿದ್ದಿದೆ.

ಈ ಮಾಗಿಯ ಬೆಳಗಿನಲ್ಲಿ ನೀನೂ ಬಾನಿನಂತೆ ಮಂಜಿನ ಮುಸುಗು ಹಾಕಿಕೊಂಡು ಸುಳಿದಾಡುತಿರುವೆಯೇನು? ಇಲ್ಲದಿರೆ ನನ ಗೇತಕೆ ಈ ನಿನ್ನ ಹುಚ್ಚು?

# ೧೯. ಬೈಗು

ವಿಶ್ವದ ವರ್ಣಶಿಲ್ಪಿ ಸಂಧ್ಯಾಗಗನಪಟದಲ್ಲಿ ನೂರಾರು ಬಣ್ಣಗಳಿಂದ ಸಾವಿರಾರು ಚಿತ್ರಗಳನು ಬರೆದಿದ್ದನು.

ಅಲ್ಲಿ ಹರಿದು ಹರಿದು ಸೋತು ನಿಂತ ಹೊಳೆ; ಇಲ್ಲಿ ತೆರೆಗಳಿಲ್ಲದೆ ನಿದ್ದೆಗೈಯುವ ಕೆರೆ. ಅತ್ತ ಮೇರೆಯರಿಯದ ಕಡಲೊಂದರ ಕರೆ; ಇತ್ತ ಹೊನ್ನಿನ ಮಳಲು ದಿಣ್ಣೆ. ಅಲ್ಲಿ ಬೆಟ್ಟ, ಇಲ್ಲಿ ಬಂಡೆ; ಅಲ್ಲಿ ಬನ, ಇಲ್ಲಿ ಮನೆ; ಅಲ್ಲಿ ಹುಲಿ, ಇಲ್ಲಿ ಕರಡಿ.—ನೂರಾರು ಬಣ್ಣಗಳು! ಸಾವಿರಾರು ಚಿತ್ರಗಳು!

ನಾನು ಹಸುರು ಹುಲ್ಲಿನ ಬಯಲ ಮೇಲೆ ಕುಳಿತು ಆ ಮೇಘ ವಿರಚಿತ ಯಕ್ಷಲೋಕದಲ್ಲಿ ತಿರುಗಾಡಿದೆ. ಒಬ್ಬನೆಯೆ ಆ ಹೊನ್ನಿನ ಹೊಳಲಿನಲ್ಲಿ ಮನ ಬಂದಂತೆ ಸುತ್ತಿದೆ.

ಒಯ್ಯೊಯ್ಯನೆ ಹಕ್ಕಿಗಳ ಕೂಗು ನಿಂತಿತು. ನಗರಕ್ಕೈದುವ ಎತ್ತಿನ ಗಾಡಿಗಳ ಗಡಗಡ ಕಟಕಟ ಸದ್ದು ಮಾತ್ರ ಕೇಳಿ ಬಂದಿತು.

ಪಡುವಲೆಡೆಯ ಬಣ್ಣ ಬದಲಾಯಿಸಿತು; ಚಿತ್ರ ಬದಲಾಯಿಸಿತು. ನೀಲವರ್ಣಮಿಶ್ರವಾದ ಬೂದುಬಣ್ಣದ ಹೆಮ್ಮುಗಿಲುಗಳು ಬೆಟ್ಟಗಳಂತೆ ನಿಂತುವು. ಅವುಗಳ ಹಿಂದೆ ತುಸುನಸುಗೆಂಪು ನಲಿದಿತ್ತು.

ಸಾಯಂಕಾಲವು ಧ್ಯಾನಮುಗ್ನಳಾದ ಮಹಾ ತಪಸ್ವಿನಿಯಂತಿತ್ತು.

ಆಕಾಶದ ಒಂದು ಮೂಲೆಯಲ್ಲಿ ತದಿಗೆಯ ಚಂದ್ರನು ಗುಟ್ಟಾಗಿ ಹೊಳೆಯುತ್ತಿದ್ದನು.

ಒಯ್ಯೊಯ್ಯನೆ ಇರುಳಿಳಿಯ ತೊಡಗಿತು.

ಇರುಳು ಹಗಲನು ಚುಂಬಿಸುವ ಸಮಯದಲ್ಲಿ ನೀನೆನ್ನ ಚುಂಬಿಸಿದೆ.

ನಿನ್ನನುರಾಗ ನನ್ನೆದೆಯನು ತುಂಬಿತುಳುಕಿತು.

# ೨೦. ಕಣ್‌ತೆರೆ, ಶಿಲಾಮೂರ್ತಿ

ಓ ದಿವ್ಯ ಶಿಲಾಮೂರ್ತಿ, ಜನ್ಮಜನ್ಮಾಂತರಗಳಲ್ಲಿ ಕಲ್ಪಕಲ್ಪಾಂತರಗಳಿಂದಲೂ ನಿನ್ನೆದುರು ನಿಂತು ಜೀವನದಾರತಿಯನೆತ್ತುತಿಹೆನು.

ನವೆದು ಮುಗಿಯದಿಹ ಕರ್ಪೂರವನು ನೆಚ್ಚುಗೆಡದೆಯೆ ಬೇಸರದೆ ಮುದದಿಂದ ತುಂಬುತಿಹೆನು.

ಆದರೂ ನೀನು ಮಾತಾಡದಿರುವೆ, ಅಲುಗಾಡದಿರುವೆ, ಕಣ್ದೆರೆಯದಿರುವೆ. ನಂಬುಗೆ ನಡುಗುವುದೊ ಏನೊ ಎಂಬಂತೆ ಸುಮ್ಮನಿರುವೆ.

ಸುಟ್ಟ ಸೂಡಿನ ಮೇಲೆ ಮರಳಿ ಮೂಡಿಬಂದು ನಿನ್ನ ಪೂಜೆಯ ಮಾಡುತಿಹೆನು.

ಗುಡಿತುಂಬ ಬಿದ್ದಿರುವುದು ಸುಟ್ಟಿಲಬುಗಳ ರಾಶಿ ; ಜನ್ಮ ಜನ್ಮಗಳಲ್ಲಿ ಎನಗಿದ್ದ ದೇಹಗಳ ಹೆಣಬೂದಿ ಸುತ್ತಲೂ ಬೆಟ್ಟವಾಗಿರುವುದು.

ಆದರೂ ನೀನಿನ್ನೂ ದಯೆದೋರದಿರುವೆ, ಓ ರಮ್ಯ ಶಿಲಾಮೂರ್ತಿ.

ನಿನ್ನ ಕೃಪೆಯೆನಗಾಗಿಹುದು, ಬಲ್ಲೆ. ನಿನ್ನರಿವು ಇನಿತೆನಗೆ ಬಂದಿಹುದು, ಬಲ್ಲೆ. ಆದರವುಗಳನೊಲ್ಲೆ ; ನೀನೆ ನೀನೆನಗೆ ಬೇಕು.

ಮುಸುಕು ಮುಬ್ಬುಗಳು ಸಾಕು ; ಸೂಚನೆಗಳು ಸಾಕು ; ವೇಷದಾಟಗಳು ಸಾಕು ; ನನಗಿಂದು ನೀನೆ ಬೇಕು.

ಕಲ್ಲಿಗೇ ಕಣ್‌ಬಂದು, ಕಲ್ಲಿಗೇ ಉಸಿರ್‌ಬಂದು, ಕಲ್ಲಿಂದೆ ನೀನು ಹೊರಹೊಮ್ಮಿ ಬಂದುದನು ಕಾಣಬೇಕೆಂಬುದೇ ನನ್ನ ನಿಡುಬಯಕೆ.

ನಟನೆಯನು ಬಿಟ್ಟೆನಗೆ ವ್ಯಕ್ತಿದೋರು, ಓ ಪುಣ್ಯ ಶಿಲಾಮೂರ್ತಿ.

# ೨೧. ಅನಂತಯಾತ್ರೆ

ನಾನಂದು ಯಾತ್ರೆ ಹೊರಟಂದು ವಿಶ್ವ ಮೌನದಿಂದಿತ್ತು. ದೇಶ ನಿದ್ದೆಗೈದಿತ್ತು. ಕಾಲ ಕನವರಿಸಿತ್ತು. ಕತ್ತಲೆ ಬೆಳಕಿನ ಗಬ್ಬದಲಿ ಮಲಗಿತ್ತು. ಬೆಳಕು ಕಣ್ ಮುಚ್ಚಿತ್ತು. ಸೂರ್ಯಾದಿ ಗ್ರಹ ಚಂದ್ರ ನಕ್ಷತ್ರಗಳು ಸೊನ್ನೆಯಲಿ ಗೊಣಗುತಿದ್ದುವು, ನಾನಂದು ಯಾತ್ರೆ ಹೊರಟಂದು.

ನಾನು ಹೊರಡಲು ದೇಶ ಮೈಮುರಿದೆದ್ದಿತು. ಕಾಲ ಎಚ್ಚರಗೊಂಡಿತು. ಬೆಳಕು ಕಣ್ದೆರೆಯಿತು; ಅದರ ಕಣ್ಣಿನಿಂದ ಕತ್ತಲೆ ಹೊರಹೊಮ್ಮಿತು. ಸೂರ್ಯಾದಿ ಗ್ರಹ ಚಂದ್ರ ನಕ್ಷತ್ರಗಳು ನನ್ನೊಡನೆ ಬರುತ್ತೇವೆ ಎಂದು ಅಳತೊಡಗಿದುವು.

ಕಡೆಗೆ ಎಲ್ಲರೂ ನನ್ನನ್ನು ಹಿಂಬಾಲಿಸಿದರು.

ಯಾತ್ರೆಯ ಹುಚ್ಚಿಗೆ ನಾನೆ ಕಾರಣನಾದೆ.

ಇಂದು ನೆನಹು ಅಲ್ಲಿಗೆ ನುಗ್ಗಲರಿಯದು; ಮನವು ಹಿಂಜರಿಯುವುದು. ಜೊತೆ ಬಂದ ಯಾತ್ರಿಕರೊ ಬರಿಯ ಹೇಡಿಗಳು.

ದೇಶ, ಕಾಲ, ಬೆಳಕು, ಕತ್ತಲೆ, ಸೂರ್ಯ, ಚಂದ್ರ, ಗ್ರಹ, ನಕ್ಷತ್ರ ಎಲ್ಲರೂ ಬರಿಯ ಬೆಪ್ಪುಗಳು— ನನ್ನ ಸಹ ಯಾತ್ರಿಕರು!

ಹಿಂದೆ ನೋಡುವುದಿಲ್ಲ; ಮುಂದೆ ನೋಡುವುದಿಲ್ಲ. ಕುರಿಗಳಂದದಿ ಬರಿದೆ ನನ್ನೊಡನೆ ಕುರುಡು ನಂಬುಗೆಯಿಂದ ಬೆನ್ನಿನೊಳೆ ತೇಲಿ ಬರುತಿಹರು.

ನಾನು ಹಾದಿ ತಪ್ಪಿದರೆ ಅವರೂ ತಪ್ಪುವರು; ನಾನು ಹಾದಿ ಹಿಡಿದರೆ ಅವರೂ ಹಿಡಿವರು. ದಾಸನ ದಾಸಾನುದಾಸರಂತಿಹರಲ್ಲಾ, ನನ್ನ ಸಹಯಾತ್ರಿಕರು!

ನಾನು ಕತ್ತಲೆಯಲ್ಲಿ ತಡವುತ್ತಿಹೆನು. ನನ್ನ ಸೊಲ್ಲನು ಕೇಳಿ ಎಲ್ಲ ನುಗ್ಗಿ ಬರುತಿಹರು.

ಎಷ್ಟು ಸಾರಿ ಹಾದಿ ತಪ್ಪಿದೆ? ಎಷ್ಟು ಸಾರಿ ಡೊಂಕುದಾರಿ ಹಿಡಿದೆ? ನಿನ್ನಿಯನ್ನರಸುವುದರಲ್ಲಿರಲಿ, ಸುಳ್ಳನುಳಿವುದರಲ್ಲಿಯೇ ಎನಿತು ಬಲಗುಂದಿಹೋದೆ?

ಆದರೆ ನೀನು ಮುಗುಳ್ನಗೆ ಬೀರುತ್ತಿರುವೆ ದೂರದಲಿ ನಿಂತು!

# ೨೨. ಎಂದಿಗೈತರುವೆ?

ಎಂದಿಗೈತರುವೆ? ಓ ಎನ್ನ ದೊರೆಯೆ, ಈ ಎನ್ನ ಗುಡಿಗೆ ನೀನೆಂದಿಗೈತರುವೆ?

ನೀನಿರುವೆ ಎಂದಾನು, ನೀ ಬರುವೆ ಎಂದಾನು ಗುಡಿಯ ಕಟ್ಟಿದೆ; ಕಟ್ಟಿ ಕಾಯುತಿರುವೆ.

ನೀ ಬರಲು ಕುಳ್ಳಿರಿಸಲೆಂದಾನು ಸ್ವರ್ಣಪೀಠವನೆ ಸಿದ್ಧಮಾಡಿರುವೆ; ನಿನ್ನನೇ ಎದುರುನೋಡುತಿರುವೆ.

ಹೂಗಳನು ಕೊಯ್ದು ತಂದಿರುವೆ; ಮಾಲೆಗಳ ನೆಯ್ದು ನಿಂದಿರುವೆ. ಗುಡಿಯ ಗುಡಿಸಿರುವೆ; ತೊಳೆದು ರಂಗವಲ್ಲಿಯ ಬರೆದು ಸಿಂಗಾರಮಾಡಿರುವೆ. ಗಂಧ ಗುಗ್ಗುಳ ಹೊತ್ತಿಸಿರುವೆ; ಕೀರ್ತನೆಗಳನು ಹಾಡುತಿರುವೆ.

ನೀ ಬರುವೆ ಎಂಬುದನು ಜನರಿಗೊರೆದೆ; ಬಂದೆಲ್ಲ ಕಾದು ಕಾದು ಹಿಂತಿರುಗಿದರು, ದೊರೆಯೆ.

ಕೇಳಿಸಿತದೊಮ್ಮೆ ನಿನ್ನ ಪ್ರಸ್ಥಾನಭೇರಿ. ಕಾಣಿಸಿತದೊಮ್ಮೆ ನಿನ್ನ ರಥಚೂಡಕೇತನ. ಆದರವು ಮರೆಯಾದುವೈ, ಓ ದೊರೆಯೆ, ನಿನ್ನ ಪರಿವಾರ ಪಾದ ಸಂಭೂತ ಕೆಂಧೂಳಿಯ ಮುಗಿಲಿನಲ್ಲಿ!

ಎಂದಿಗೈತರುವೆ? ಓ ಎನ್ನ ದೊರೆಯೆ, ಈ ಎನ್ನ ಗುಡಿಗೆ ನೀನೆಂದಿಗೈತರುವೆ?

# ೨೩. ಮುಪ್ಪರಿಯದ ಮುಗುಳ್ನಗೆ

ಇದೋ! ದಾರಿ ಕವಲೊಡೆದಿಹುದಿಲ್ಲಿ. ಇಲ್ಲಿ ನಾವಗಲಲೇ ಬೇಕು. ನಿನ್ನ ದಾರಿಯ ನೀನು ಹಿಡಿ. ನನ್ನ ದಾರಿಯು ನನಗೆ.

ಆದರೆ ನಾವಗಲುವ ಮುನ್ನ ಮುಗುಳ್ನಗೆಯ ಬೀರಿ ಬೀಳ್ಕೊಳ್ಳು ವೆನು ನಿನ್ನ.

ನೀನೆನ್ನ ಮರೆತು ಬಿಡುವೆ; ನಾ ಬಲ್ಲೆ. ಆದರೆನ್ನೀ ಮುಗುಳ್ನ ಗೆಯ ನೀ ಮರೆಯಲಾರೆ; ಎಂದಿಗೂ ಮರೆಯಲಾರೆ.

ನೀನು ಹೋದೆಡೆ ಹೋಗುವುದಿದು; ನೀನು ನಿಂತೆಡೆ ನಿಲ್ಲುವು ದಿದು. ಯುಗಗಳನು ದಾಟಿ, ಕಲ್ಪಾಂತರಗಳನು ಹಾಯ್ದು ಜನ್ಮ ಜನ್ಮಾಂತರಗಳನು ನಟ್ಟುಚ್ಚಳಿಸಿ ನಿನ್ನನೆಡೆಬಿಡದೆ ಹಿಂಬಾಲಿಸುವುದಿದು.

ನಡುದಾರಿಯಲಿ ನೀನು ಎಲ್ಲಿಂದಲೋ ಬಂದು ಎನ್ನೊಡನೆ ಸೇರಿದೆ. ದಾರಿಯುದ್ದಕೂ ಇಬ್ಬರೂ ನಲಿದೆವು, ಮಾತಾಡಿದೆವು. ಒಬ್ಬರ ಬೇಸರವನೊಬ್ಬರು ಕಳೆದೆವು. ಆದರೀಗ ಅಗಲುವ ಸಮಯ ವೈತಂದಿದೆ.

ನೋಯದಿರು; ಮುಂದೆ ನಡೆ.

ನನ್ನ ಮುಗುಳ್ನಗೆ ನಿನ್ನೊಡನೆ ಬರುವುದು.

ಮುಂದೆ ನಾನೂ ಯುಗಗಳನು ದಾಟಿ, ಕಲ್ಪಾಂತರಗಳನು ಹಾಯ್ದು, ಜನ್ಮ ಜನ್ಮಾಂತರಗಳನು ನಟ್ಟುಚ್ಚಳಿಸಿ, ಎಲ್ಲರೂ ಸೇರುವೆಡೆ ಯಲಿ ನಿನ್ನನೆದುರುಗೊಂಡಾಗ ನಮ್ಮೊಲ್ಮೆಗೆ ಈ ಮುಗುಳ್ನಗೆಯೆ ಸಾಕ್ಷಿಯಾಗುವುದು.

ಏಕೆನೆ, ಮುಗುಳ್ನಗೆಗೆ ಮುಪ್ಪಿಲ್ಲ.

# ೨೪. ಬತ್ತದಿರಲಿ ಕಣ್ಣೀರು

ಕಣ್ಣೀರನೊರಸಿಕೊ! ಕಳೆದುದಕಳಲು ನಮಗೆ ಹೊತ್ತಿಲ್ಲ.

ಇಲ್ಲಿಗೇ ಮುಗಿಯಲಿಲ್ಲ ಎಮ್ಮಳಲ ಹೊರೆ. ಅತ್ತತ್ತು ಕಣ್ಣೀರನೆಲ್ಲ ಬತ್ತಿಸಬೇಡ. ಮುಂದೆ ದಾರಿಯೊಳೆಮ್ಮನಡ್ಡಗಟ್ಟುವ ದುಃಖಗಳಿಗಾಗ ಳಲು ಒಂದಿನಿತು ಕಣ್ಣೀರಾದರೂ ಇರಲಿ ಎದೆಯ ಅರಳಿನಲಿ.

ಏಕೆನೆ, ನಮ್ಮ ಕಷ್ಟಕ್ಕೆಲ್ಲ ಕಣ್ಣೀರೆ ಮದ್ದು!

# ೨೫. ಬಾನೆಡೆಗೇರು, ಓ ಆತ್ಮಪಕ್ಷಿ!

ಏಳು, ಮೇಲೇಳು! ಮತ್ತೊಮ್ಮೆ ಚಿಮ್ಮಿ ಹಾರು ಬಿತ್ತರದ ಅನಂತತೆಯೆಡೆಗೆ. ಹುಳು ಹಿಡಿದು ಹಾಳಾಗಿರುವ ಹಳೆನೆಚ್ಚುಗಳನೆಲ್ಲ ಕಳಚಿ ಕೊಟ್ಟಿಬಿಡು. ಹೊಚ್ಚ ಹೊಸನೆಚ್ಚುಗಳ ರೆಕ್ಕೆಯನು ಬಿಚ್ಚಿ ಬಾನೆಡೆಗೇರು, ಓ ಎನ್ನ ಆತ್ಮ ಪಕ್ಷಿ!

ನೂರು ಸಾರಿ ಸೋತಿದ್ದರೇನಂತೆ!
ನೂರೊಂದು ಸಾರಿ ಬಿದ್ದಿದ್ದರೇನಂತೆ?
ಸೋಲು ಗೆಲವಿಗೆ ಮೆಟ್ಟಲು!
ಬಿದ್ದರಲ್ಲವೆ ಮರಳಿ ಏಳುವುದು!
ಬೀಳದಿದ್ದವನು ಎಂದೂ ಮೇಲೆದ್ದವನಲ್ಲ!

ಸಮರವೇ ಜೀವನದ ತಿರುಳು; ಹೋರಾಟವೇ ಜೀವನದ ಚಿಹ್ನೆ. ಆದರ್ಶಪ್ರಾಪ್ತಿಯೇ ಜೀವನ ಪರಿಸಮಾಪ್ತಿ.

ಮಣ್ಣಿನಲಿ ಬಿದ್ದು ಹೊರಳಿ ಬದುಕುವುದಕಿಂತಲೂ ಬಾನಿನಲಿ ತೇಲಿ ಹಾರಿ ಸಾಯುವುದೆ ಮೇಲು.

# ೨೬. ಪಾಳುಬೀಳುವ ಮುನ್ನ ಬಾ !

ಬೇಸಗೆಯ ಬೇಸರ ಸುತ್ತಣಿಂದೈತಂದು ಕೆಲಸವಿಲ್ಲದ ಬಗೆಗೆ ಏನನೋ ಕರಕರೆಯ ಗೊಣಗುತಿದೆ.

ಸುಖವಿಲ್ಲ, ದುಃಖವಿಲ್ಲ, ಏನೊಂದು ಇಲ್ಲ. ನೀನುಳಿದ ಎದೆಮಣೆ ಬರಿದಾಗಿದೆ. ಶೂನ್ಯತೆಯ ಭಾರದಲಿ ಬಾಳು ಬಿರಿಯುತ್ತಿದೆ.

ತಲೆಯೆತ್ತಿ ನೋಡಿದರೆ ಅನಂತ ಗಗನದ ನೀಲವಿಸ್ತೀರ್ಣದಲಿ ಯಾವೆಡೆಯೂ ಮುಗಿಲಿನ ಸುಳಿವಿಲ್ಲ. ನಗ್ನದಿಗಂತವೂ ನಿರಾಶೆಯನ್ನೇ ಸೂಚಿಸುತ್ತಿದೆ.

ಗಾಳಿಯೂ ನಡೆಗೆಟ್ಟು ನಿದ್ದೆ ಮಾಡುತ್ತಿದೆ.

ತಿಳಿಗೊಳದಿಂದ ಮೇಲೆ ನೆಗೆದು ಹುಡಿಯಲ್ಲಿ ಹೊರಳಾಡುವ ಮರಿಮೀನಿನಂತೆ ನನ್ನಾತ್ಮ ತುಡಿಯುತ್ತಿದೆ.

ಓ ಎನ್ನ ಜೀವನದ ರಸಮೂರ್ತಿ, ಎನ್ನೆದೆಯ ಗುಡಿ ಪಾಳು ಬೀಳುವ ಮುನ್ನ ಬಾ, ಮಂಡಿಸಲ್ಲಿ.

# ೨೭. ರಂಗಪ್ರವೇಶ

ಮಳೆ ಮುಗಿಲು ಮುತ್ತಿ ಆಷಾಢದ ಆಕಾಶದಲ್ಲಿ ಮಂಕು ಕವಿದಿದೆ. ದಿಗಂತದ ಅಸ್ಫುಟರೇಖೆ ರಹಸ್ಯಸೂಚಕವಾದರೂ ವಿಷಣ್ಣವಾಗಿದೆ.

ಎಡೆಬಿಡದೆ ಸುರಿಯುತಿದೆ ಬೇಸರದ ಸೋನೆ.

ಜಡಿಯ ಪೀಡನೆಗೆ ಮೊಗಗುಂದಿ ಮೈಯುಡುಗಿದಂತೆ ತೋರುತಿವೆ, ಕಿರುಬಯಲ ಗಿಡಬಳ್ಳಿ ಹೊದರು.

ನಿರಂತರ ಅವಿಶ್ರಾಂತ ವರ್ಷಧಾರೆಯ ಜವನಿಕೆಯ ಮುಸುಕು ಹಾಕಿಕೊಂಡ ಗುಡ್ಡಗಾಡುಗಳು ಬಹು ದೂರದ ಕನಸುಗಳಂತಿವೆ.

ಜಗತ್ತಿನೊಡನೆ ಜೀವನವೂ ಒದ್ದೆಯಾಗಿದೆ.

ಈ ದೃಶ್ಯದಲ್ಲಿ ಯಾವೆಡೆಯಿಂದ ನೀನು ರಂಗಪ್ರವೇಶ ಮಾಡುತ್ತೀಯೋ ಎಂದು ಕಾದು ಕಾತರನಾಗಿದ್ದೇನೆ.

ಏಕೆನೆ, ನಿನ್ನೊಂದು ಚುಂಬನದಿಂದ ಪ್ರಕೃತಿ ಪ್ರಸನ್ನವಾಗುವುದು; ನಿನ್ನೊಂದು ಮುಗುಳ್ನಗೆಯಿಂದ ಜ್ಯೋತಿಪ್ರವಾಹ ಚಿಮ್ಮಿ ಹರಿದು ಭೂವ್ಯೋಂತರಿಕ್ಷಗಳನು ತುಂಬಿ ತುಳುಕಿ ದಿಗ್ದಿಗಂತ ವ್ಯಾಪಿಯಾಗುವುದು, ಓ ಎನ್ನ ಜೀವನ ದೇವತೆ.

# ೨೮. ನಿನ್ನ ಪ್ರೀತಿ

ಮೇಘರಾಜನು ಭೂಮಿದೇವಿಯ ಆಹ್ವಾನವನು ಸ್ವೀಕರಿಸಿದ್ದಾನೆ.

ಹೊಸ ಮಳೆಹನಿಗಳ ಹಜ್ಜೆಸಪ್ಪುಳವನಾಲಿಸಿ, ದೂರದಿಂದೈತಂದ ಕೆಳೆಯರನೆದುರುಗೊಳಲೆಂದು ಕುತೂಹಲದಿಂದ ತಲೆದೋರಿದ ಹೊಸ ಹಸುರಿನಲಿ ತುಳುಕುತಿದೆ ಜೀವರಸ.

ಎಳಬಿಸಿಲಿನಲಿ ಹೊಳೆವ ಹಿಮಮಣಿಗಳು ತಳಿರ ತುದಿಯಲಿ ಸಿಲ್ಕಿ ಕಂಪಿಸುತ್ತಿವೆ.

ಕೊಳಕೆ ಕಲ್ಲೆಸೆದಂತೆ ತೇನೆ ಹಕ್ಕಿಯ ಕೂಗು ಮೌನವನು ಮಿಡಿಯುತಿದೆ.

ಬಯಲ ಪೊದೆಯಲಿ ಸುಳಿವೆಲರಿನಲಿ ಬಳುಕುತಿಹ ಜೇಡನ ಬಲೆಯಲ್ಲಿ ಸೆರೆಬಿದ್ದ ಹನಿಗಳು ಮಿರುಗುತಿವೆ ಕಿರುನಗೆಯ ಚೆಲ್ಲಿ.

ಮೂಡಣಾಗಸದ ನೀಲಾಂಗಣದಿ ಬೆಳ್ಮುಗಿಲು ರಂಗವಲ್ಲಿಯ ನಿಕ್ಕಿದೆ.

ಈ ಸೊಗದ ಬೆಳಗಿನಲಿ ಬಯಲಿನ ಹಸುರುಹಾಸಗೆಯ ಮೇಲೊರಗಿರುವ ದೀರ್ಘತರುಛಾಯೆಯಲಿ ಕುಳಿತು ನಿನ್ನೊಡನೆ ನಾನು ಗಳಹುತಿಹುದೇನು ?

ನನ್ನ ನುಡಿಗೆ ಅರ್ಥವೇನೊಂದಿಲ್ಲ ; ಅದರಿಂದ ನೀನು ತಿಳಿಯಬೇಕಾದುದೇನೊಂದಿಲ್ಲ. ಆದರೂ ನೀನು ಕಿವಿಗೊಟ್ಟು ಕೇಳುತಿರುವೆ ; ಅರ್ಥವಾದಂತೆ ಕಿರುನಗೆಯ ಬೀರುತಿರುವೆ.

ಏಕೆನೆ, ನಿನಗೆನ್ನ ತೊದಲುಮಾತಿನಲಿ ಬಹು ಪ್ರೀತಿ, ಓ ನನ್ನ ಪ್ರೇಮ ಮೂರ್ತಿ.

# ೨೯. ದಿಗಂತ ದೇವ

ದಿವಾರಾತ್ರಿಗಳ ಆಲಿಂಗನ ಸಮಯದ ದೀನ ಪ್ರದೋಷ ಜ್ಯೋತಿ ನಿರ್ಜನ ನಿಕುಂಜಗಳ ಮೇಲೆ ಮಾಯೆಯ ಚುಂಬನದಂತೆ ಪವಡಿಸಿದೆ.

ಆಷಾಢಮಾಸದ ಅಧೌತಗಗನತಲದಲಿ ನೀಲ ಗಜೋಪಮ ಸಜಲ ಜಲಧರಗಳು ದುರ್ದಮ್ಯಾಧೀರತೆಯಿಂದ ಸಂಚರಿಸುತ್ತಿವೆ.

ಕ್ಷುದ್ರ ಶೈಲಾಗ್ರದಲಿ ಕುಳಿತೆನ್ನ ಹೃದಯ ಆವುದೋ ಒಂದು ಅವರ್ಣನೀಯ ಲೋಲುಪತೆಯಿಂದ ದಿಗಂತವನೇ ಎವೆಯಿಕ್ಕದೆ ನಿರೀಕ್ಷಿಸುತ್ತಿದೆ.

ಸ್ವರ್ಗ ಮರ್ತ್ಯಂಗಳ ಆಲಿಂಗನ ಸ್ಥಾನವಾದ ದಿಗಂತವು ಸಹಸ ರಹಸ್ಯ ಗರ್ಭಧಾರಿಯಾಗಿ ಸತ್ಯಮಿಥ್ಯೆಗಳ ನಡುವೆ ಬೆಳೆದಿರುವ ಅನಂತ ಮಾಯಾರೇಖೆಯಂತೆ ಸುದೀರ್ಘಭೂಮವಾಗಿದೆ.

ಬಗೆ ಕೋರಿದರೂ ಕೈಗೆ ಬಾರದಿಹ ನೂರಾರು ಸವಿಗನಸುಗಳು ದಿಗಂತದ ಹಿಂದುಗಡೆ ಮೈಗರೆದು ನಿಂತು ಕೈ ಬೀಸಿ ಕರೆಯುವಂತ್ರೆ ತೋರುತಿದೆ.

ಓ ಎನ್ನ ಜೀವದ ಚಿರಮೋಹದ ದಿಗಂತವೇ, ನಿನ್ನ ರಮಣೀಯ ನಗ್ನಶೂನ್ಯತೆಯ ಅಂತರಾಳದಲಿ ಹುದುಗಿರುವ ಕಮನೀಯ ಚಿರ ಪೂರ್ಣತೆ ನನ್ನನು ಸರ್ವದಾ ಮೋಹಿಸಿ ಕರೆಯುತ್ತಿದೆ; ನಿನ್ನಾ ಅತೀತದ ಆಕರ್ಷಣೆಗೆ ಸೆರೆಯಾಗಿ ಶರಣುಹೋದ ನಾನು ಉತ್ಕಂಠ ಭಾವದಿಂದ ಕಂಬನಿದುಂಬಿ ಕಾತರನಾಗಿರುವೆ.

ಏಕೆನೆ, ನೀನು ದಿಗಂತದಂತೆಯೆ ಸಹಸ್ರ ರಹಸ್ಯ ಪೂರ್ಣ ಮಾಯಾವಿ.

# ೩೦. ನಿನ್ನ ಸಾನ್ನಿಧ್ಯ

ಕತ್ತಲೆ ಮುತ್ತಿದೆ. ಮುಗಿಲು ಕವಿದು ಬಾನೆಲ್ಲ ವಿಷಣ್ಣವಾಗಿದೆ. ಎತ್ತ ಕಣ್ದಿಟ್ಟಿಯಟ್ಟಿದರೂ ತಾರೆಯೊಂದರ ಸುಳಿವಿಲ್ಲ.

ತರುಗಳ ತುದಿಯಲ್ಲಿ ಗಾಳಿಯ ಚಿಹ್ನೆಯಿಲ್ಲ. ಮೌನಭಾರದಲಿ ಹೃದಯವೇದುತಿದೆ.

ನಿರ್ಜೀವ ನೀರವತೆ ಮಹಾಭೀಮಶವದಂತೆ ದಿಗಂತದಿಂದ ದಿಗಂತದೆಡೆಗೆ ಹಬ್ಬಿ ಬಿದ್ದಿದೆ.

ವಿಶ್ವವೆಲ್ಲವೂ ಹಿರಿಯ ನಿರಾಶೆಯೊಂದರಂತೆ ನಿರ್ವಿಣ್ಣ ಭಾವದಲಿ ತೂಕಡಿಸುತಿದೆ.

ನೀನೆನ್ನ ಬಳಿಯಿರುವೆ ಎಂಬೊಂದು ಆಲೋಚನೆಯನುಳಿದು ಬೇರೆ ಯಾವ ಸಂಗಾತಿಯೂ ನನಗಿಲ್ಲ.

ನಿನ್ನ ಸಾನ್ನಿಧ್ಯಭಾವದಲಿ ಇನಿತು ಜೀವರಸವಿರುವುದೆಂದು ಹಿಂದಾವಾಗಲೂ ನನಗೆ ಹೊಳೆದಿರಲಿಲ್ಲ.

# ೩೧. ನಿರ್ಭರತೆ

ಆಕಾಶದ ನೀಲಗಭೀರ ಅನಂತತೆಯನು ನೋಡಿ,

ಸಮುದ್ರದ ಅಪಾರ ಸುನೀಲ ವಿಸ್ತೀರ್ಣವನು ನೋಡಿ,

ಮುಗಿಲವರೆಗೆ ತಲೆಯೆತ್ತಿ ನಿಂತಿರುವ ಪರ್ವತ ಶಿಖರಗಳ ಧೀರ ಪ್ರಶಾಂತ ಸ್ಥೈರ್ಯವನು ನೋಡಿ,

ಸೂರ್ಯ ಚಂದ್ರ ತಾರೆಗಳ ಚಿರಜ್ಯೋತಿಯನು ನೋಡಿ,

ಶ್ರಾವಣ ಸಮೀರಣನ ದುರ್ದಮ್ಯಧೀರತೆಯನು ನೋಡಿ,

ವಸಂತ ವನರಾಜಿಯ ವಿವಿಧ ವಿಚಿತ್ರ ಶತಸಹಸ್ರಸ್ವರ್ಣವರ್ಣಮಯ ಐಶ್ವರ್ಯವನು ನೋಡಿ,

ಎಲೈ ಕಿರಿಯ ಹೂವೆ, ಬೆದರದಿರು ; ಬೆರಗಾಗದಿರು ; ನಾಚದಿರು; ಕರುಬದಿರು.

ಏಕೆನೆ, ಯುಗಯುಗಾಂತರಗಳೂ ಅಳೆದು ಪೂರಯಿಸಲರಿಯದಿಹ ಅನಂತಕಾಲಮಾತೆ ಅವುಗಳೆಲ್ಲವನು ಹೆತ್ತು ಹೊರೆವಂತೆಯೆ ನಿನ್ನನೂ ಹೆತ್ತು ಹೊರೆಯುತಿಹಳು.

ನೀನೂ ಅನಂತಕಾಲಮಾತೆಯ ಮಹಾಗರ್ಭದಿಂದೊಗೆತಂದ ಕೋಮಲ ಪ್ರಿಯತಮ ಶಿಶು ಎಂಬುದನು ಮರೆಯದಿರು.

ನಿನ್ನಾ ಎಲ್ಲ ಸೋದರರಿಗಾಗಿ ನೀನೈತಂದಿರುವಂತೆ ನಿನಗಾಗಿ ಅವರೆಲ್ಲರಾವಿರ್ಭವಿಸಿಹರೆಂಬುದನು ನೆನಹಿನೊಳಿಟ್ಟು ನಿಶ್ಚಿಂತ ನಿರ್ಭರತೆಯಿಂದಿರು, ಓ ಕಿರಿಯ ಹೂವೆ.

ಏಕೆನೆ, ನಾವೆಲ್ಲ ಪರಸ್ಪರೋಪಜೀವಿಗಳು !

# ೩೨. ಮಕರಂದ ಮೌನಿ

ಇವರೆಲ್ಲ ನಿನ್ನ ನೋಡಿರುವರೇ, ಓ ಎನ್ನ ದೊರೆಯೆ ?

ಹಗಲಿರುಳೂ ನಿನ್ನನರಿತವರಂತೆ ನಿನ್ನನು ಕುರಿತು ಮಾತಾಡುತಿಹರು.

ನಿನಗಿಂತಲೂ ನಿನ್ನನು ಕುರಿತ ಹರಟೆಯೇ ಇವರಿಗೆ ರುಚಿಕರವಾಗಿದೆ !

ಸೂತ್ರಬದ್ಧವಾಗುವವರೆಗೂ ಮಾಧುರ್ಯ ಮಧುರವಾಗದೆಂದು ಇವರ ನಂಬುಗೆ ಇರುವಂತೆ ತೋರುತಿದೆ.

ಮಕರಂದ ಪಾನಮಾಡಿದ ಮಧುಕರದಂತೆ ನಿನ್ನೊಲ್ಮೆಯ ಸವಿಯ ನೆನಗಿತ್ತು ನನ್ನನು ಮೂಕನನ್ನಾಗಿ ಮಾಡು, ಓ ಎನ್ನ ಅಕ್ಷಯ ಮಾಧುರ್ಯನಿಧಿಯೆ !

# ೩೩. ಅಕ್ಷಯ ಅನಂತ

ನಿನ್ನ ಕೆಂದುಟಿಯ ಹಿಂದುಗಡೆ ಅಮಿತ ಸಂಖ್ಯೆಯ ಸೂರ್ಯ ಚಂದ್ರೋದಯಗಳ ಆಗಣಿತ ರಹಸ್ಯಗಳು ಹಣ್ಣಾಗಿ ಹುದುಗಿಕೊಂಡಿವೆ.

ನಿನ್ನ ಕಣ್ಗಳ ತಿಳಿಗೊಳದಾಳದಲಿ ನೂರಾರು ಹೇರಾಸೆಗಳ ಮಾಯೆಯ ಮೋಹ ಬೀಡುಬಿಟ್ಟಿದೆ.

ನಿನ್ನ ಮುಂಗುರುಳುಗಳ ಮರೆಯಲ್ಲಿ ವಿಶ್ವಗ್ರಾಸಿಯಾದ ಕದ್ದಿಂಗಳ ಕತ್ತಲೆ ಮನೆಮಾಡಿದೆ.

ನಿನ್ನ ಚೆಂಗೆನ್ನೆಗಳ ಪರ್ಣಶಾಲೆಯಲಿ ಇಂದ್ರಧನು ವರ್ಣಮಯ ವಸಂತಮಾಸದ ಮಹಾ ಕುಸುಮಸಮ್ಮೇಲನ ನೆರೆದಿದೆ.

ನಿನ್ನೊಂದು ಕಿರುಗನಸಿನೆದುರಿನಲಿ ಹಿಮಾಲಯ ಮಹಾಶೈಲವೂ ನಾಚಿ ತಲೆಬಾಗಿ ನಿಂತಿದೆ.

ನಿನ್ನೊಂದು ಮೆಲುನಗೆಯ ಶಾಶ್ವತಜ್ಯೋತಿಯ ಮುಂದೆ ಯುಗ ಯುಗಾಂತರಸ್ಥಾಯಿಗಳೆಂದು ಹೆಮ್ಮೆಯಿಂದ ಹೊಳೆಯುತಿಹ ಶಶಿ ಸೂರ್ಯತಾರೆಗಳ ದೀಪ್ತಿ ಕ್ಷಣಭಂಗುರವಾಗಿದೆ.

ಏಕೆನೆ, ನೀನು ಚಿರನೂತನ ಸೌಂದರ್ಯಮೂರ್ತಿ.

# ೩೪. ಅಗ್ನಿಗರ್ಭಿತ ಮಂದಸ್ಮಿತ

ಭಾದ್ರಪದ ಮಾಸದಲಿ, ಪುಣ್ಯಪ್ರಭಾತದಲಿ, ನಿರ್ಮಲಾಕಾಶದಲಿ, ಬಿಳಿಮುಗಿಲ ತೆಳುದೆರೆಯನು ಹೊದೆದು ಮಂಗಳಕರ ಸಾಂತ್ವನಮಯ ನೀಲಮಂದಸ್ಮಿತವನು ಬೀರಿ ನೀನೈತಂದೆ.

ಹಸುರು ಪಸಲೆಯಲಿ ಪಸರಿಸಿದ್ದ ಹಸುಳೆಬಿಸಿಲಿನಲಿ ನಾನು ಶಿಶುಲೀಲೆಯನು ಮರೆತು ರುದ್ರಸ್ವಪ್ನಗಳೊಡನೆ ಕರಾಳಲೀಲೆಯಲಿ ತೊಡಗಿದ್ದೆ.

ತಾಯಿಯ ಸೆರೆ, ಮಕ್ಕಳ ಹೊರೆ, ಮುಕ್ತಿಯ ಕರೆ;

ಸೋತು ಹುಡಿಯಲಿ ಬಿದ್ದು ಕಂಬನಿಗರೆವ ಸೋದರರ ಅಸೀಮ ರೋದನ;

ಗೆದ್ದ ಹೆಮ್ಮೆಯಲಿ ಮಾನವನಾತ್ಮದ ಪಾವನತೆಯನೆ ಧಿಕ್ಕರಿಸಿ ನಲಿವವರ ರಕ್ತಪದ ಚಿಹ್ನೆ;

ಮತರಾಹು ಹಿಡಿದವರ ಅಂಧಶ್ರದ್ಧೆಯ ಕರ್ಕಶ ಪಾಪಮಯ ಶಂಖಧ್ವನಿ;

ದಾರಿದ್ರ್ಯದಲಿ ನೊಂದವರ ಗೋಳು;

ಧನವಂತರ ನಿಷ್ಕರುಣ ಅಟ್ಟಹಾಸ;

ಈ ಎಲ್ಲ ಕನಸುಗಳ ಕಾಣುತಿದ್ದೆ!

ನೀನೈತಂದೆ; ಬೆಚ್ಚಿಬಿದ್ದು ಕಣ್ದೆರೆದೆದ್ದೆ.

ನಿನ್ನ ಮುಗುಳುನಗೆಯ ಹೊನಲಿನಲಿ ನನ್ನ ಕರಿಗನಸುಗಳೆಲ್ಲ ಮುಳುಗಿ ಕರಗಿ ತೇಲಿಹೋದುವು.

ಅರ್ಥಪರಿಪೂರ್ಣ ಅನಿರ್ವಚನೀಯ ಅನಂತತೆಯಲ್ಲಿ ಬಿರಿದ ಬಬ್ಬುಳಿಗಳಂತೆ ಮಾಯವಾದುವು!

ಆದರೇನು?

ಸರೂಪವಾಗಿದ್ದಾ ಎನ್ನ ವಿಷಾದ ಅರೂಪವಾಗಿ ಮತ್ತೂ ಭಯಾನಕವಾಗಿದೆ!

ನಾನರಿಯೆನೇ, ನಿನ್ನ ಆ ಮಂದಸ್ಮಿತ ಈ ಸಸ್ಯಶ್ಯಾಮಲಾ ವಸುಂಧರೆಯಂತೆ ಅಗ್ನಿಗರ್ಭಿತವಾದುದೆಂದು!

# ೩೫. ಸತ್ಯಮಿಥ್ಯೆಗಳ ಕದನದಲಿ

ಸತ್ಯಮಿಥ್ಯೆಗಳ ಕದನದಲಿ ಸತ್ಯಕ್ಕೆ ಜಯವಾಗಲೆಂದು ಹರಸಿ ಹಾರೈಸಿದರೂ ಮಿಥ್ಯೆಯ ಪಕ್ಷದಲಿ ನಿಂತು ಹೋರಾಡುತ್ತಿದ್ದೇನೆ.

ಸತ್ಯ ಗೆದ್ದಾಗಲೆಲ್ಲ ಹಿಗ್ಗುತ್ತೇನೆ; ಮಿಥ್ಯೆ ಗೆಲಲು ಕುಗ್ಗುತ್ತೇನೆ.

ಆದರೂ ಸತ್ಯದ ಗೆಲವಿನ ಗಾಂಭೀರ್ಯಕಿಂತಲೂ ಮಿಥ್ಯೆಗೆ **ಸೋಲುವ** ಮಾಧುರ್ಯವೆ ಮಧುರತರವಾಗಿದೆ.

ಓ ಸತ್ಯಮೂರ್ತಿ, ಮಿಥ್ಯೆಯ ಮೋಹದ ಬಣ್ಣದ ಬುದ್ಬುದ **ಸಿಡಿ** ದೊಡೆಯಲಿ! ಸತ್ಯದ ಶೂನ್ಯತೆಗೆ ಸರ್ವಸ್ವವಾಗಲಿ!

# ೩೬. ನಿನ್ನ ನೆನೆಯಲು

ನಿನ್ನ ನೆನೆಯಲು ಬಗೆ ಹಿಗ್ಗಿ ಹಾರುತ್ತದೆ; ಸುಗ್ಗಿಯ ಕನಸು ಕಂಡು ಮಾಗಿಯ ಮರವು ಬರಲಿರುವ ಸಂತಸಕೆ ನಡನಡ ನಡುಗುವಂತೆ, ನನ್ನ ಮೈಯೆಲ್ಲ ವಿಕಂಪಿಸುತ್ತದೆ.

ನೀನೆನ್ನ ಬಳಿ ಬರಲು ನನ್ನೆದೆ ತುಂಬಿ ತುಳುಕುತ್ತದೆ. ಹೊಸ ಮಳೆಯ ನೀರು ಬರಲು ಕಾಡಿನ ತೊರೆ ಉಕ್ಕಿ ಮೊರೆದು ಹಾರಿ ಜಾರಿ ಕ್ರೀಡಾಶೀಲ ಉನ್ಮತ್ತ ತರಂಗಗಳಿಂದ ಹಸುರುದಡವನಪ್ಪಳಿಸುವಂತೆ, ಭಾವಯಮುನೆ ಹೃದಯ ಬೃಂದಾವನವನು ಬಡಿದು ನಡುಗಿಸುತ್ತದೆ,- ನೀನೆನ್ನ ಬಳಿಬರಲು.

ನೀನೆನ್ನನಾಲಿಂಗಿಸಿ ಚುಂಬಿಸಲು ನಿನ್ನ ಚೆಂದುಟಿಯ ಸುಖ ಕೋಮಲ ಮೃದು ಮಧುರ ಸ್ಪರ್ಶನಕೆ ನನ್ನ ಅಹಂಕಾರ ಕರಗಿ ಲಯ ವಾಗುತ್ತದೆ ನಿನ್ನಾತ್ಮದಲಿ ತಲ್ಲೀನವಾಗಿ—ಬಾಂದಳದ ಮುಗಿಲಮನೆ ಯಿಂದೈತಂದು ತಿರೆವೆಣ್ಣಿನ ಸಿರಿಗೆನ್ನೆಗೆ ಮುತ್ತುಕೊಡುವ ಆಲಿಕಲ್ಲಿನಂತೆ!

# ೩೭. ನಿರೀಕ್ಷೆ

ನೀನ್ನೈತರುವೆ ಎಂದು ಕಾತರದಿ ಕಾದೆ. ಹಾದಿಯ ತುದಿಯಲಿ ನೀ ಬರುವುದನು ಕಾಣುವೆನೆಂದು ಸಲಸಲವೂ ಎಲೆವನೆಯ ಹೊರಗೆ ಹೋದೆ·

ಕೊಂಕು ಕೊಂಕಾಗಿದ್ದ ಕೆಂಪಾದ ಹಾದಿ ದಿಗಂತದಲಿ ಕಣ್ಮರೆಯಾಗಿತ್ತು. ನಿರ್ಜನವಾಗಿತ್ತು.

ನಿಡುಸುಯ್ದು ಹಿಂತಿರುಗಿ ಬಂದು ಚಿಂತೆಯಲಿ ಮುಳುಗಿದೆ.

ಬೇಸಗೆಯ ಬಿಸಿಲಿನಾಸರಕೆ ಬೇಸತ್ತು ಮೌನಭಾರದಿಂದೆದೆ ಕುಸಿಯೆ ವಿರಹಯಾತನೆಯ ಮರೆಯಲೋಸುಗವೆ ಮಲಗಿ ನಿದ್ರಿಸಲೆಳಸಿದೆ.

ಎದೆಯ ಉಬ್ಬೆಗದಲ್ಲಿ ನಿದ್ದೆಬಾರದೆ ಇರಲು, ಎಲೆಮನೆಯ ಹೊರಗಡೆ ಸುಳಿಗಾಳಿಯ ನರ್ತನಕೆ ನರ್ತಿಸುವ ತರಗೆಲೆಗಳ ನಾದಕ್ಕೆ ಮರುಳಾಗಿ ಮರಳಿ ಮರಳಿ ತಲೆಯೆತ್ತಿ ಈಕ್ಷಿಸಿದೆ.

ಅನಂತ ನಿರೀಕ್ಷೆಯೆ ತಪಸ್ಸಾಯಿತೆನಗೆ!

# ೩೮. ಇಲ್ಲಗೆಯ್ !

ಬಾ, ನನ್ನ ಮಧುರ ಮೋಹನ ಮೂರ್ತಿ ! ಹೇ ಅನಂತ ನಿರೀಕ್ಷೆಯ ತಪಃ ಫಲಮೂರ್ತಿ !

ನನ್ನ ಬಳಿ ವೈಸೋಂಕಿನಲಿ ಕುಳಿತುಕೋ. ನಿರಾಕಾರತೆಯ, ಅನಿಶ್ಚಯತೆಯ, ಸುದೂರತೆಯ ಸಂದೇಹವನು ಸಂಹರಿಸು. ನಿನ್ನನಪ್ಪಿ ನೀನಿರುವುದನು ನಂಬಿ ನಲಿಯುವೆನು.

ನನ್ನನಾಲಿಂಗಿಸು ; ಚುಂಬಿಸು ; ನನ್ನನಿಲ್ಲಗೈ !

ಅಯ್ಯೋ, ಈ ಬೇಸರದ ಏಕಾಂತವೂ ಸಾಕೆನಗೆ; ಈ ಮೌನದ ಪೀಡನೆಯೂ ಸಾಕೆನಗೆ.

ನಿನ್ನ ಚುಂಬನ ಆಲಿಂಗನಗಳಿಂದ ನನ್ನ ಏಕಾಂತವಳಿದು ಹೋಗಲಿ! ನಿನ್ನೊಲುಮೆಯ ಸವಿಮಾತುಗಳಿಂದ ಈ ಮಹಾಮೌನ ಸಿಡಿದೊಡೆದು ಅಸಂಖ್ಯ ಸುಮಧುರ ಸ್ವರಗಳಾಗಲಿ !

# ೩೯. ತೇಲಿಬಿಡು ಜೀವನಾವೆಯನು!

ತೇಲಿಬಿಡು ನನ್ನ ಜೀವನಾವೆಯನು ನಿನ್ನ ಪ್ರೇಮ ಸ್ರೋತದಲಿ.

ಶಾಂತಿವಾರಿಧಿಯ ಸನ್ನಿಧಿಗೆ ಹೋದರದು ಹೋಗಲಿ; ಹೋಗದಿದ್ದರೆ ಬಿಡಲಿ.

ಅನಂತಕಾಲವೂ ನಿನ್ನ ಹೃದಯದ ಭಾವತರಂಗ ಮಾಲೆಯ ಚುಂಬನಗಳಾನಂದವನು ಅನುಭವಿಸಲಿ.

ನಿನ್ನ ನಲ್ಮೆಯ ತುಂತುರು ನನ್ನ ಕೆನ್ನೆ ತುಟಿಗಳನು ತೋಯಿಸಲಿ.

ನಿನ್ನ ತೆರೆನಗೆಯ ಲೀಲೆ ನನ್ನ ಮೊಗದ ಮೇಲೆ ತೆರೆ ತೆರೆಯಾಗಿ ನೆಗೆಯಲಿ!

ಯುಗಯುಗ ಮುಗಿದರೂ ನಮ್ಮಾಟ ಮುಗಿಯದಿರಲಿ.

ಅನಂತ ಪ್ರೇಮ ಸ್ರೋತವಾಗಿರು ನೀನು; ನಿನ್ನೆದೆಯ ಮೇಲೆ ನಲಿದಾಡುವ ಜೀವನಾವೆಯಾಗಿರುವೆ ನಾನು!

# ೪೦. ಪ್ರೇಮಾದ್ವೈತ

ಮಾತಿನಿಂದೇನು? ಮಂತ್ರದಿಂದೇನು? ಮಾತು ಮಂತ್ರಗಳೆಲ್ಲ ಬರಿ ನೆವಗಳೆಮಗೆ.

ನನ್ನ ನಿನ್ನಯ ಮಧುರ ಮಿಲನವು ಮಾತುಗಳರಿಯದ ಮಂತ್ರ ಗಳಳೆಯದ ಹಿರಿಯಾಳದಲಿ ಶಾಶ್ವತವಾಗಿದೆ.

ಏಕೆಂದರೆ, ನನಗೂ ನಿನಗೂ ಭೇದವಿಲ್ಲ;

ಏಕೆಂದರೆ, ಪ್ರೇಮ ಅದ್ವೈತ!

# ೪೧. ಅಭಿಸಾರಿಕೆ

ದಾರಿಯ ಬಳಿ ಹುಲ್ಲುಹಸುರಿನ ಮೇಲೆ ಕುಳಿತೆ, ನಿನ್ನ ಬರವನೆ ಹಾರೈಸಿ.

ಬಣ್ಣಬಣ್ಣದ ಬಟ್ಟೆಯನುಟ್ಟು, ಮುಖದಲ್ಲಿ ಮೃದುಹಾಸವನೆ ತೊಟ್ಟು ಸಂಧ್ಯಾಸುಂದರಿ ಪಶ್ಚಿಮ ಗಗನ ವೇದಿಕೆಯಲ್ಲಿ ಹಕ್ಕಿಗಳಿಂಚರಕೆ ನೃತ್ಯಲಾಸ್ಯವನಾಡಿ ಮೆಲ್ಲಮೆಲ್ಲನೆ ಅನಂತದಿಗಂತ ವಿಲೀನೆಯಾದಳು.

ನಿಶಾರಮಣಿಯ ವಿಶ್ರಾಂತಿಚುಂಬನ ಶ್ರಾಂತವಸುಂಧರೆಯ ಪಲ್ಲವಾವಧರಗಳ ಸುಮಶಯ್ಯೆಯ ಮೇಲೆ ಮೃದುವಾಗಿ ಪವಡಿಸತೊಡಗಿತು.

ಸೌಂದರ್ಯವನು ಕಂಡ ವೈರಾಗ್ಯದ ಹೃದಯ್ದಲಿ ಒಲ್ಮೆಯ ಹೊಂಗಿಡಿ ಹೊಳೆಯುವಂತೆ ಬಾನಿನ ಕತ್ತಲು ತುಂಬಿದ ಬಿತ್ತರದೆದೆಯಲಿ ತಾರೆಯೊಂದರಳಿ ಎವೆಯಿಕ್ಕಲಾರಂಭಿಸಿತು.

ನೀನು ನಿನ್ನಿತರ ಜೊತೆಗಾರರೊಡನೆ ಲೀಲಾನಿಮಗ್ನನಾಗಿದ್ದೆ.

ನೀನೆನ್ನ ಮರೆತೆಯೋ ಎಂಬ ಆಶಂಕೆಯಲಿ ಎದೆ ತಳಮಳಿಸಿತ್ತು.

ಆದರೆ ತುಸು ಹೊತ್ತಿನ ಮೇಲೆ ಬೆಂಗಡೆಯಿಂದೈತಂದು ನೀನೆನ್ನ ಕಣ್ಣು ಮುಚ್ಚಲು ಕತ್ತಲೆಯಳಿದು ಹೋಯ್ತು ; ಬೆಳ್ಳನೆ ಬೆಳಗಾಯ್ತು !

# ೪೨. ಚಿರಮುದ್ರಿತ

ನಿನ್ನವನು ನಾನು ; ನನ್ನವನು ನೀನು. ನಿನ್ನಲ್ಲಿ ನಾನು ; ನನ್ನಲ್ಲಿ ನೀನು. ನೀನೆ ನಾನು ; ನಾನೆ ನೀನು.

ನೀನು ತುಟಿಯಾಗಿರಲು ನಾ ಕೆನ್ನೆಯಾಗುವೆನು ; ನೀ ಕೆನ್ನೆಯಾಗಿರಲು ನಾನು ತುಟಿಯಾಗುವೆನು.

ನಾವಿಬ್ಬರೂ ಎಂದು ತುಟಿಯೊಳೊಂದಾಗುವೆವೊ ಅಂದು ಬ್ರಹ್ಮಾಂಡವೆಲ್ಲವೂ ಸೊನ್ನೆ.

ಜಗವೆಲ್ಲ ನಮ್ಮ ತುಟಿ ಕೆನ್ನೆಗಳ ಮುತ್ತಿನ ಕೆತ್ತನೆ.

ಮುತ್ತಿನ ಬೆಲೆ ನೆಲೆಗಳನು ತಿಳಿದವರೊಬ್ಬರಿಲ್ಲ.

ಅಂತ ಅನಂತಗಳು ಮುತ್ತಿನ ಮುದ್ರೆಯಿಂದ ಚಿರ ಮುದ್ರಿತವಾಗಿ ಒಂದನೊಂದು ಬಿಡಲಾರದಿವೆ.

# ೪೩. ಕಾಲಡಿಯ ನೆಳಲಾಗಿ

ನೀನೆನ್ನ ಬಳಿಬಂದು ಕೆಳೆತನದ ನೇಹದಲಿ ನನ್ನೊಡನಾಡಿದಂದು ನಾ ನಿನ್ನ ಮಹಿಮೆಯನು ತಿಳಿಯದಾದೆ.

ನೀನೆನ್ನ ನಪ್ಪಿ ಮುದ್ದಿಸಲು ತನುಪುಳಕದಾನಂದದಲಿ ನನ್ನಂತೆಯೇ ನೀನೆಂದು ತಿಳಿದುಬಿಟ್ಟೆ.

ಬೆಟ್ಟ ಕಣಿವೆಗಳಲ್ಲಿ ಹೊಲಗದ್ದೆಗಳಲಿ ಕೆರೆ ತೊರೆಗಳ ಬಳಿ ನೀನೆನ್ನ ಕೈಹಿಡಿದು ಕರೆದೊಯ್ದು ನನ್ನ ಕಿವಿಗಳಲಿ ಕನಸುಗಳನುಸುರಲು, ಕೇಳಿ, ಮಂಕು ಕವಿದವನಂತೆ ಸುಮ್ಮನಿದ್ದೆ.

ನಿನ್ನ ಪರಿಚಯ ಹೆಚ್ಚಿದಂತೆಲ್ಲ ನನ್ನೊಲುಮೆಗೆ ನೀನು ದಾಸನಾಗಿರುವೆ ಎಂಬ ಹೆಮ್ಮೆಯಲಿ ನಾನುದಾಸೀನನಾದೆ.

ನೀನೆನ್ನ ಬಿಟ್ಟಿರಲಾರೆ ಎಂಬ ಗರ್ವದಿಂದುಬ್ಬಿದೆ.

ಏನಿದು, ಓ ನನ್ನ ಜೀವೇಶ? ದಿನ ಕಳೆದಂತೆಲ್ಲ ದೂರ ದೂರ ದೂರ ಹೋಗಿ ನೀನಿಂದು ದಿಗಂತದಲಿ ನಿಂತಿರುವೆ!

ನನ್ನ ಗರ್ವ ತಲೆಬಾಗಿದೆ. ನನ್ನ ಬಿಂಕ ಹುಡಿಯಲ್ಲಿ ಹೊರಳುತ್ತಿದೆ. ದಿಗಂತದಲಿ ನಿಂತಿರುವ ನೀನು ಕಣ್ಮರೆಯಾಗುವೆಯೋ ಎಂದು ಎದೆ ಬೆದರಿ ಬೇಯುತ್ತಿದೆ.

ಮನ್ನಿಸೆನ್ನನು, ದೊರೆಯೆ. ಮತ್ತೊಮ್ಮೆ ಬಳಿಗೆ ಬಾ. ನಾ ನಿನ್ನ ಕಾಲಡಿಯ ನೆಳಲಾಗಿ ನಿನ್ನನಾಲಿಂಗಿಸುವೆ.

# ೪೪. ಕನಸಿನೊಳಾದರೂ

ನನಸಿನಲಿ ದೇಹದಲಿ ನಾ ನಿನ್ನ ಬಳಿಗೆ ಬರಲಾರೆ. ಮನಸಿನಲಿ ಕನಸಿನಲಿ ನಾನೈತರುವೆ, ಓ ನನ್ನ ನಲ್ಮೆ ಮೂರುತಿ !

ದೇಹದಲಿ ಬರಲಾರೆ : ನೂರುಕೋಟೆಗಳಿವೆ ; ನೂರು ಕೋಟಲೆಗಳಿವೆ. ಹಾದಿಯಲಿ ಬೆಟ್ಟ ಹೊಳೆ ಮರುಭೂಮಿಗಳಿವೆ. ಬೆಟ್ಟವನೇರಲಾರೆ ; ಹೊಳೆಯನೀಜಲಾರೆ ; ಮರುಭೂಮಿಯನು ಉತ್ತರಿಸಲಾರೆ.

ಮನ್ನಿಸೆನ್ನನು, ಪ್ರಿಯನೆ ; ದೌರ್ಬಲ್ಯಮೂರ್ತಿ ನಾನು.

ಕನಸಿನಲಿ ನನ್ನ ರಾಜ್ಯಕೆ ನಾನೆ ಚಕ್ರವರ್ತಿ. ಅಲ್ಲಿ ನಿರಂಕುಶ ಪ್ರಭು ನಾನು. ಅಲ್ಲಿ ದೃಷ್ಟಿಯಂತೆಯೆ ಸೃಷ್ಟಿ.

ಕೋಟೆಕೋಟಲೆಗಳೆಲ್ಲ ಅಲ್ಲಿ ಚೂರಾಗುವುವು. ಬೆಟ್ಟ ಹೊಳೆ ಮರುಭೂಮಿಗಳೆಲ್ಲ ದಾರಿಯಾಗುವುವು. ಒಂದು ನಿಮಿಷಕೆ ನಿನ್ನ ನಾ ಸೇರಿ ನಿನ್ನ ತಕ್ಕೆಯೊಳಗಾಗುವೆನು.

ಅಲ್ಲಿ ನೋಡುವರಿಲ್ಲ ; ಅಲ್ಲಿ ಕರುಬುವರಿಲ್ಲ. ನಾಲ್ಕು ಕಣ್ಗಳ ಹೊರತು ಬೇರೆ ಕಣ್ಗಳೂ ಅಲ್ಲಿಲ್ಲ.

ಕನಸು ಸ್ವಾತಂತ್ರ್ಯಕೆ ತವರೂರು.

ಓ ನನ್ನ ಚುಂಬನಾಲಿಂಗನ ಮೂರ್ತಿ, ಕನಸಾದರೇನು ? ನನಸಾದರೇನು ? ಬಂದರಾಯಿತು ನಿನ್ನ ಬಳಿಗಾನು !

ಕನಸಿನೊಳಾದರೂ ನನ್ನೆದೆಗೆ ಬಾ ನೀನು !

# ೪೫. ಕಣ್ ಕಣ್ಣ ಸಂಧಿಸೆ

ನಿನ್ನ ಕಂಗಳು ಎನ್ನ ಕಂಗಳ ಸಂಧಿಸಲು, ನಾ ನಿನ್ನ ಕಣ್ಣಾಗಿ, ನೀನೆನ್ನ ಕಣ್ಣಾಗಿ........

ಮುಂದೆ ಮಾತಿಲ್ಲದಾಗುವುದು !

ಮೌನವೆ ವಾಙ್ಮಯವಾಗುವುದು !

ನಿನ್ನ ಕಣ್ಣು ಅನಂತ ನೀಲಾಕಾಶದಂತೆ ; ನನ್ನದು ಸ್ತಬ್ಧಸಾಗರದ ಅಪಾರ ಸುನೀಲ ಜಲರಾಶಿಯಂತೆ !

ನಮ್ಮಿಬ್ಬರ ಪ್ರಣಯ ಗಗನವಾರಿಧಿಗಳ ಅಂಗಜಪರಿಷ್ವಂಗ ನೀಲಿ ಮೆಯಂತೆ !

# ೪೬. ನಿನಗಿದೋ ಅನವರತ ಆಹ್ವಾನ!

ನಾನು ಕರೆದಲ್ಲದೆ ನೀನೆನ್ನ ಬಳಿಗೆ ಬರಬಾರದೇನು? ನಾ ಕರೆದ ಮೇಲೆಯೇ ನೀನು ಬರಬೇಕೇನು? ನಿನ್ನ ಸಾನ್ನಿಧ್ಯಕಾಗಿ ನಾನು ಅನವರತವೂ ಪರಿತಪಿಸುತಿಹೆನೆಂಬುದನು ನೀನರಿಯೆಯೇನು?

ಅರಿತರಿತೂ ಮತ್ತೇಕೆ ಈ ಮೂದಲೆಯ ನಡತೆ? ನನ್ನ ಮೇಲೆ ನಿನಗಿರುವ ಒಲುಮೆಯುಲಿ ಔದಾಸೀನ್ಯದ ನಟನೆ ಏಕೆ? ಅವರಿವರಿರುವಾಗ ನಾ ಕರೆಯಲಳುಕಿದರೆ ನೀ ಬರಲಳುಕಲೇಕೆ?

ನಿನಗಿದೋ! ನಾ ಕರೆಯದಿದ್ದರೂ ನೀನು ಬರಬೇಕೆಂಬ ಅನಂತ ಆಹ್ವಾನ, ಓ ನನ್ನ ಪ್ರೇಮಮೂರ್ತಿ!

# ೪೭. ಚಿರವಾಗಲಿ!

ನನ್ನ ತುಟಿ ನಿನ್ನ ಚೆಂದುಟಿ ಮುತ್ತಿನ ಮಧುರ ಮದಿರೆಯನೆ ಹಾರಿ ಬಾಯಾರಿ ಬೇಗುದಿಗೊಂಡಿವೆ.

ಜಗದ ಮರುಭೂಮಿಯಲಿ ಮುತ್ತೊಂದೆ ಮರುವನ!

ಜಗದ ದುಃಖದ ನಡುವೆ ಮುತ್ತೊಂದೆ ಸುಖ.

ವಿಷಮಯ ಜಗತ್ತಿನಲಿ ಅಮೃತವೆನೆ ಮುತ್ತು.

ಲೋಕದ ಅಶಾಂತಿಯಲಿ ಶಾಂತಿಯೆನೆ ಮುತ್ತು.

ನಿನ್ನ ತುಟಿ ನನ್ನ ತುಟಿಯು ಸಂಧಿಸುವ ಸ್ಥಾನದಾ ಕಂದರದಿ ಪ್ರವಹಿಸುವ ವಿಸ್ಮೃತಿಯ ವೈತರಣಿಯಲ್ಲಿ ಜಗಜ್ಜೀವನದ ಅನಂತ ಆಪತ್ತುಗಳೆಲ್ಲ ಮುಳುಗಿ ಕರಗಿ ಲಯವಾಗಲಿ.

ನಾನು ನೀನು ಜಗತ್ತುಗಳಳಿದು ನಮ್ಮೊಲವಿನ ಮುತ್ತೊಂದೆ ಚಿರವಾಗಲಿ.

# ೪೮. ಧ್ಯಾನಲೀನ

ನಾನು ಬಾಗಿಲು ಮುಚ್ಚಿ, ಊದುಕಡ್ಡಿಯ ಹೊತ್ತಿಸಿ, ನಿನ್ನ ಧ್ಯಾನಿಸಲೆಂದು ಪದ್ಮಾಸನವನಾಂತು ಮೈಮರೆತೆ, ಓ ಸೌಂದರ್ಯ ಮೂರ್ತಿ.

ಮನಸ್ಸು ನೆನಹಿನ ಸುಂದರ ಬೃಂದಾವನದಲ್ಲಿ ವಸಂತಮಾಸದ ತಂಬೆಲರಂತೆ ನಲಿದಾಡಿತು.

ಫಾಲ್ಗುಣಮಾಸದ ದೀರ್ಘದಿಗಂತದಲ್ಲಿ ಕುಂಕುಮಾರುಣ ಬಿಂಬದ ಸೂರ್ಯನ ಉದಯವನು ಕಂಡೆ ;

ಮಾಘಮಾಸದ ಗಿರಿ ವನ ಕಂದರಗಳಲ್ಲಿ ಮಂಜಿನ ಮಾಯಾ ಮೋಹದ ಇಂದ್ರಜಾಲವನು ಕಂಡೆ ;

ಸುಗ್ಗಿಯ ಸಗ್ಗವಕ್ಕಿಗಳ ಸಾಸಿರ ಸಾಸಿರ ಇಂಚರಗಳನು ಆಲಿಸಿ ಪುಳಕಿತನಾದೆ ;

ದಶಲಕ್ಷ ಲಕ್ಷದಶ ನಕ್ಷತ್ರ ನೀಹಾರಿಕಾ ಸಮಾಕೀರ್ಣ ಮಹಾ ವಿಶ್ವದ ಅನಂತತೆಯಲ್ಲಿ ಸಂಚರಿಸಿ ಸ್ತಬ್ಧನಾದೆ !

ಸತ್ಯ ಸೌಂದರ್ಯಗಳ ಮಂದಹಾಸದಲ್ಲಿ ಲೀನವಾದೆ !

# ೪೯. ಅಪರೋಕ್ಷಾನುಭೂತಿ

ನನ್ನೆದೆ ಶೂನ್ಯವಾಗುತ್ತಿದೆ. ಬಾಯ್ದೆರೆವ ಶೂನ್ಯತಾ ಪಾತಾಳದ ಭಯಂಕರತೆಗೆ ಕಂಪಿಸುತ್ತಿಹೆ ನಾನು. ಬಾ, ತುಂಬದನು ನಿನ್ನ ಸವಿ ದುಟಿಯ ಮಧುರ ಚುಂಬನದಿಂದ, ಓ ನನ್ನ ಪ್ರೇಮರಸಮೂರ್ತಿ.

ಚಾರುತರ ಪಾಶಗಳೆಲ್ಲ ಸಡಿಲಿ ನಗ್ನ ನಿರಾಕಾರದಲಿ ಲಗ್ನವಾಗುತಿಹೆ ನಾನು. ನಿನ್ನ ಮೋಹನಾಲಿಂಗನ ಬಂಧನದಿ ಬಿಗಿದು ನನ್ನನು ಕಟ್ಟು.

ಅಯ್ಯೊ, ಬಂದು ನನ್ನನು ಮುಟ್ಟು! ಮುಟ್ಟು! ಮುಟ್ಟು!

# ೫೦. ವಿರಹ ವೈಶಾಖ

ಹೃದಯವನ ತಪಿಸುತಿದೆ ವಿರಹ ವೈಶಾಖದಲಿ; ಸೊಂಪಿಡಿದ ತರುತಲದಿ ನೆಳಲು ಬರಿದಾಗುತಿದೆ; ಪಕ್ಷಿಗಳು ಗಾನಗೈಯದಿವೆ ತಾಪಮೂರ್ಛೆಗೆ ಸಂದು.

ಭಯಂಕರ ಅಕರ್ಮಾವಸ್ಥೆಯ ಮಹಾಲಸ್ಯವನು ಸಹಿಸಲಾರೆನು ನಾನು.

ಓ, ಚಲಿಸದಿಹ ತರುಲತಾ ಪರ್ಣನಿವಹಕೆ ಚಲನೆಯನು ನೀಡೈ, ಪವನ ಪಾವನ ಮೂರ್ತಿ.

ನನ್ನ ಏಕಾಂತವನು ತೊತ್ತಳದುಳಿ!

ನನ್ನ ಜಡತಪಸ್ಸಿಗೆ ಭಂಗವನು ತಾ.

ತೇಜಃಪೂರ್ಣ ರಸಮಯ ಚೈತನ್ಯವನುದ್ರೇಕಿಸು.

ನನ್ನೊಡನಾಡು ಬಾ; ನನ್ನೊಡನೋಡು ಬಾ; ನನ್ನೊಡನೆ ಕೂಡು ಬಾ, ಓ ನನ್ನ ಸರಸ ಸುಂದರ ಮೂರ್ತಿ!

# ೫೧. ಆಶಾಮೂರ್ತಿ

ಶ್ರಾವಣ ಮಾಸದ ಪ್ರಾತಃಕಾಲದಲಿ ಕೊಟಡಿಯಲ್ಲಿ ಕುಳಿತಾನು ಲೋಕದ ಶೋಕದ ಚಿಂತೆಯಲಿ ಮುಳುಗಿ ಮರುಗುತಿದ್ದೆ.

ಮುಂದೆ ಗತಿ ಏನೆಂದು ನಿರಾಶೆಯಲಿ ಕೊರಗುತಿದ್ದೆ.

ಸತ್ಯ ಧರ್ಮಗಳಿಗೆ ಸಲಸಲವೂ ಬಂದೊದಗುವ ಪರಾಜಯವನು ಕುರಿತು,

ರಾಷ್ಟ್ರ ರಾಷ್ಟ್ರಗಳ ಪರಸ್ಪರ ದ್ವೇಷಾಸೂಯೆಗಳನು ಕುರಿತು,

ಶಾಂತಿಸಂಧಾನಗಳ ಹಿಂದೆ ಹುದುಗಿ ಕಣ್ಣುಮಿಟುಕಿಸುತ್ತಿರುವ ಕ್ರಾಂತಿ ಸಮರಗಳ ದುರಭಿಸಂಧಿಯನು ಕುರಿತು,

ಗೆದ್ದವರು ಸೋತವರ ಮೇಲೆ ನಡೆಸುತಿರುವ ಅತ್ಯಾಚಾರಗಳನು ಕುರಿತು,

ಜೀವನದ ನೂರಾರು ದುರ್ಭೇದ್ಯ ಸಮಸ್ಯೆಗಳನು ಕುರಿತು,

ಮುಂದೆ ಗತಿ ಏನೆಂದು ನಿರಾಶೆಯಲಿ ಕೊರಗುತಿದ್ದೆ.

ಇದ್ದಕಿದ್ದಂತೆ ನಿಡುಸುಯ್ದು ಮೇಲಿದ್ದೆ :

ಗವಾಕ್ಷದಾಚೆಗೆ ದೃಷ್ಟಿಯನಟ್ಟೆ ನೋಡಲು, ಅಲ್ಲಿ ಯಾವ ಶೋಕದ ಛಾಯೆಯೂ ಕಾಣಿಸಲಿಲ್ಲ. ಎಲ್ಲವೂ ಸುಖ ಶಾಂತಿ ಪೂರ್ಣವಾಗಿತ್ತು.

ನನ್ನ ಚಿಂತೆಗೆ ನಾನೆ ನಾಚಿದೆ.

ಹೊರಗೆ ಹಸುರು ಬಯಲಿನಲಿ ಇಬ್ಬನಿಗಳ ಮೇಲೆ ಎಳಬಿಸಿಲು ಮುದ್ದಾಗಿ ಮಲಗಿತ್ತು.

ಹೂದೋಟದಲಿ ಗುಬ್ಬಚ್ಚಿಗಳ ಗಾನ ನಿಶ್ಚಿಂತವಾಗಿತ್ತು; ನಿರುದ್ವಿಗ್ನವಾಗಿತ್ತು; ಆನಂದವಾಗಿತ್ತು.

ಕುಸುಮಗಳು ನನ್ನನು ನೋಡಿ ನಗುತಿದ್ದುವು.

ದೂರದಲಿ, ಮರಗಿಡಗಳಲ್ಲಲ್ಲಿ ತುಂಬಿದ್ದ ಹಸುರು ಹೊಲಗಳ ನಡುವೆ, ಚಲಿಸುತಿದ್ದುವು ಬಿಳಿಯ ಚುಕ್ಕಿಗಳೆರಡು!

ಆ ಬಿಳಿಯ ಚುಕ್ಕಿಗಳ ಹಿಂದುಗಡೆ ಕರಿಯ ಚುಕ್ಕಿಯದೊಂದು ಚಲಿಸುತಿತ್ತು!

ಬಿಳಿಯ ಚುಕ್ಕಿಗಳೆರಡು ಬಿಳಿಯ ಎತ್ತುಗಳು! ನೇಗಿಲನು ಕೈಲಾಂತ ಒಕ್ಕಲಿಗನೆ ಕರಿಯ ಚುಕ್ಕಿ!

ತೂರಿಹೋದುವು ನನ್ನ ಚಿಂತೆಗಳೆಲ್ಲ; ಮಾಯವಾಯಿತು ನನ್ನ ನಿರಾಶೆ!

ಏನೆ ಆಗಲಿ ಜಗಕೆ, ನೀನಿರುವ ಪರ‍್ಯಂತ ನಮಗೆ ಕೇಡಿಲ್ಲ! ನಿನ್ನ ದರ್ಶನದಿಂದ ನಮ್ಮೆಲ್ಲ ನಿರಾಶೆಗಳೂ ಸಿಡಿದೊಡೆಯುವುವು, ನೀರ ಮೇಲಣ ಗುಳ್ಳೆಗಳಂತೆ!

# ೫೨. ನಮಸ್ಕಾರ!

ಅಜ್ಞಾತ ಮಹಾತ್ಮನೆ, ನಿನಗಿದೋ ನಮಸ್ಕಾರ! ಸಾಷ್ಟಾಂಗ ನಮಸ್ಕಾರ!

ನೀನಾರೆ ಆಗಿರಲಿ, ನೀನೆಲ್ಲಿಯೇ ಇರಲಿ, ನಿನಗಿದೋ ನಮಸ್ಕಾರ! ಸಾಷ್ಟಾಂಗ ನಮಸ್ಕಾರ!

ಯಾವ ದೇಶದವನೋ ನೀನು? ಯಾವ ಜಾತಿಯವನೋ ನೀನು? ಯಾವ ಕರ್ಮದವನೋ ನೀನು? ಯಾವ ಧರ್ಮದವನೋ ನೀನು? ಎಂತಾದರಾಗಿರಯ್ಯಾ ನೀನು, ಹೇ ಅಜ್ಞಾತ ಮಹಾತ್ಮನೆ, ನಿನಗಿದೋ ನಮಸ್ಕಾರ! ಸಾಷ್ಟಾಂಗ ನಮಸ್ಕಾರ!

ಲೋಕದ ಕಣ್ಣಿಗೆ ನೀ ಬೀಳದಿರಬಹುದು. ಲೋಕ ನಿನ್ನನು ಲೆಕ್ಕಿಸದಿರಬಹುದು. ಆದರೆ ಜಗದೀಶನ ಕಣ್ಣನೆಲ್ಲಾ ನೀನೆ ತುಂಬಿರುವೆ! ಆತನ ಎದೆಯನೆಲ್ಲಾ ನೀನೆ ಆವರಿಸಿರುವೆ!

ಯಾರೂ ಕಾಣದ, ಯಾರೂ ಕೇಳದ ದೂರದ ಹಳ್ಳಿಯಲಿ ನೀ ಹೊಲೆಯನಾಗಿರಬಹದು;

ಹಗಲಿರುಳೂ ಗೆಯ್ಯುವ ರೈತನಾಗಿರಬಹುದು;

ಬಡಗುಡಿಯಲಿ ಜಗದೀಶನ ದಿನವೂ ಧ್ಯಾನದಿ ಮುಟ್ಟುವ ಪೂಜಕನಾಗಿರಬಹುದು;

ಮಣ್ಣನು ತಟ್ಟಿ ಮಡಕೆಯ ಮಾಡುವ ಕುಂಬಾರನಾಗಿರಬಹುದು;

ಕಮ್ಮಾರನಾಗಿರಬಹುದು; ಚಮ್ಮಾರನಾಗಿರಬಹುದು;

ದೂರದಮೇರಿಕೆಯಲಿ ನೀ ಜಲಗಾರನಾಗಿರಬಹುದು;

ಆಸ್ಟ್ರೇಲಿಯದಲಿ ನೀ ಕೂಲಿಯಾಗಿರಬಹುದು;

ಗಂಗಾತೀರದಿ ನೀ ಋಷಿಯಾಗಿರಬಹುದು;

ಲಂಡನ್ನಿನಲಿ ಯಂತ್ರ ನಡೆಯಿಸುವ ಸಾರಥಿಯಾಗಿರಬಹುದು;

ಸೆರೆಯಲಿ ನರಳುತ ಸಾಯುತ್ತಿಹ ಸತ್ಯಾಗ್ರಹಿಯಾಗಿರಬಹುದು!

ನೀನೇನಾದರು ಆಗಿರು, ನೀನಾರಾದರು ಆಗಿರು, ನೀನೆಲ್ಲಾದರು ಇರು, ಎಂತಾದರು ಇರು;

ಅಥವಾ ನೀನಿಲ್ಲದೆ ಮೃತನಾಗಿರು, ಮಣ್ಣಾಗಿರು;

ಅಜ್ಞಾತ ಮಹಾತ್ಮನೆ, ನಿನಗಿದೋ ನಮಸ್ಕಾರ! ಸಾಷ್ಟಾಂಗ ನಮಸ್ಕಾರ! ಉದ್ದಂಡ ನಮಸ್ಕಾರ!

# ೫೩. ಅವಿನಾ

ಬಾ, ಬಳಿಗೆ ಬಾ, ನನ್ನ ಸೌಂದರ್ಯಮೂರ್ತಿ.

ನಿನ್ನನಾಲಿಂಗಿಸುವೆ; ನಿನಗೆ ಮುತ್ತಿಡುವೆ; ನೀನೆ ನಾನಾಗಿ, ನಾನೆ ನೀನಾಗಿ ಒಂದಾಗುವೆ; ಬಾ, ಬಳಿಗೆ ಬಾ, ನನ್ನ ಸೌಂದರ್ಯ ಮೂರ್ತಿ.

ನೀನಂದು ಶ್ರೀರಾಮನಾದಂದು ಸಿಂಹಾಸನದ ಮೇಲೆ ಕುಳಿತಂದು ನಾ ನಿನ್ನ ಬಳಿಗೆ ಬಂದು ನಿನ್ನ ಮೊಗಕೊಂದು ಮುತ್ತಿಟ್ಟೆ, ಓ ನನ್ನ ಶ್ರೀಮೂರ್ತಿ.

ನೀನಂದು ಲಂಕೆಯಾ ರಣರಂಗದಲಿ ರಾಮಬಾಣದಿ ನೊಂದು ಅಸುದೊರೆಯುತಿದ್ದಂದು ನಾ ನಿನಗೆ ಮುತ್ತಿಟ್ಟೆ, ಓ ನನ್ನ ದುಃಖ ಮೂರ್ತಿ.

ನೀನಂದು ಕ್ರಿಸ್ತನಾಗಿ ಶಿಲುಬೆಯೇರಿ ನೊಂದು ಬೆಂದು ಸಾಯುವಂದು ನಾ ನಿನಗೆ ಬಿಜ್ಜಣವಿಕ್ಕಿ ತಂದು ತೋಯುವನೆರೆದೆ, ಓ ನನ್ನ ಚಿರ ಸಂಕಟ ಮೂರ್ತಿ.

ನೀನಂದು ಆ ಮಹಾ ನಗರದಲಿ ಅಜ್ಞಾತ ಭಿಕ್ಷುಕನಾಗಿ ರೋಗ ಪೀಡಿತನಾಗಿ ತಿರಸ್ಕೃತನಾಗಿ ಮರಣೋನ್ಮುಖನಾಗಿ ಬೀದಿಯಲಿ ದೂಳಿಯಲಿ ಬಿದ್ದು ಹೊರಳಾಡಿದಂದು ನಾ ನಿನ್ನ ಕಣ್ಣೀರನೊರಸಿ ಕೊಳೆತು ನಾರುವ ತುಟಿಗೆ ನನ್ನ ತುಟಿಯಿಟ್ಟೆ, ಓ ನನ್ನ ಚಿರದಾರಿದ್ರ್ಯ ಮೂರ್ತಿ.

ನೂರು ತಾಣದಲಿ, ನೂರು ವೇಷದಲಿ, ನೂರು ಮೇಲ್ಮೆಯಲಿ, ನೂರು ಕೀಳ್ಮೆಯಲಿ, ನೂರಾರು ಕಾಲ ದೇಶಗಳಲ್ಲಿ ನಾ ನಿನ್ನ ಕೈಬಿಡದೆ ಮೈಬಿಡದೆ ನಿನ್ನನಂಟಿರುವೆ, ಓ ನನ್ನ ಸೌಂದರ್ಯ-ದುಃಖ-ಸಂಕಟ-ದಾರಿದ್ರ್ಯ ಮೂರ್ತಿ.

# ೫೪. ಜೀವನ ಸಂಜೀವನ

ಮರುಭೂಮಿಯಲಿ ಮರುವನದ ತೆರದಿ ನೀನೆನ್ನ ಜೀವನಕೆ ಬಂದಿರುವೆ; ಜೀವನ ಸಂಜೀವನವ ತಂದಿರುವೆ.

ಬಿರು ಬಿಸಿಲ ಪರಿಹರಿಸಿ ತಂಪುನೆಳಲಿನ ಸೊಗವ ನೀಡಿರುವೆ: ಎದೆಗೆ ತಣ್ಪನೂಡಿರುವೆ.

ಬಳಲಿಕೆಯ ತೊಲಗಿಸುವ ತಂಗಾಳಿಯನು ಬೀಸುತಿಹೆ; ಶಾಶ್ವತ ಪ್ರಣಯವನು ಸೂಸುತಿಹೆ.

ತುಂಬಿ ತುಳುಕುವ ತಿಳಿಗೊಳದ ತಣ್ಣೀರ ನಂಬಿಕೆಯ ಕೊಟ್ಟಿರುವೆ; ಹೃದಯ ಕಮಲದ ಕರ್ಣಿಕೆಯ ಚೆಂದುಟಿಗಳಲಿ ಮುಟ್ಟಿರುವೆ.

ಓ ನನ್ನ ಮುದ್ದಿನ ಮರುವನವೆ, ನಿನ್ನೊಲುಮೆ ದಿಟವಾದರೆ ಈ ಆನಂತ ವಿಸ್ತೃತ ಮರುಭೂಮಿಯ ಪ್ರವಾಸವೂ ನನಗೊಂದು ವಿಹಾರ ಯಾತ್ರೆ!

# ೫೫. ಪವಾಡ ಸಾಕ್ಷಿ

ಆತನಿಹನೆಂಬುದಕೆ, ಆತನನು ನಂಬಲ್ಕೆ ಪವಾಡಗಳನರಸುತಿಹೆಯೇನು ?

ಆವುದಿದೆ ಪವಾಡವಲ್ಲದುದು ? ಅದನೆನಗೆ ತೋರಿದಪೆಯಾ ನೀನು ?

ಕಲ್ಲು ರೊಟ್ಟಿಯಾದರೆ ಮಾತ್ರ ಅದು ಪವಾಡವೇನು ? ಕಲ್ಲು ಕಲ್ಲಾಗಿರುವುದೇ ಮಹತ್ತರ ಪವಾಡವಲ್ಲವೇನು ?

ನಿನ್ನ ಕಾಲಡಿಯಲ್ಲಿ ನೋಡಿದರೆ ಅಲ್ಲಿ ಬೆಳೆದು ನಳನಳಿಸುವೆಳ ವುಲ್ಲು ಬಹುಕೋಟಿ ಯೋಜನಗಳಾಚೆಯಿಹ ನೀಹಾರಿಕೆಗೂ ಕಡ ಮೆಯ ಪವಾಡವಲ್ಲ !

ಒಂದು ಹಲ್ಲಿಯ ಕಣ್ಣು ಕಂಭವನೊಡೆದು ಮೂಡಿ ಬರುವ ನೃಸಿಂಹನಿಗೇನು ಕಡಮೆಯ ಪವಾಡವಲ್ಲ !

ನಿನ್ನೊಂದು ಕೈ ಬೆರಳ ಕುಣಿಕೆಯ ರಚನೆ ರವಿಯ ಸುತ್ತಲೂ ಸುತ್ತುತಿಹ ಗ್ರಹಗಳ ಚಲನೆಗಿಂತಲೇನು ಕೀಳಾದ ಪವಾಡವಲ್ಲ !

ಒಂದಿರುವೆಯ ಮುಂದೆ ಲಕ್ಷ ತಾರ್ಕಿಕರ ವಾದ ಹೊಲ್ಲ !

# ೫೬. ಕೃಪಾಮಹಿಮೆ

ಯಾರರಿಯದಿಹ ಹೆಬ್ಬನದ ಕೆರೆಯ ಕೆಸರು ಮೂಲೆಯಲಿ ತಾವರೆ ಪೊದಳಿದಂದು, ದೇವಾಲಯದ ಗರ್ಭಗೃಹದಲಿ ದೇವದೇವನ ಮುಡಿಯ ಮೇಲೆ ತಾನು ಮುಂಡಿಸುವೆನೆಂದು, ಅದು ಕನಸಿನಲ್ಲಿಯೂ ಭಾವಿಸಿರಲಿಲ್ಲ.

ನಿಬಿಡ ತರುಛಾಯೆಯಲಿ ಬನಗತ್ತಲೆಯಲಿ ತುಂಬಿ ತಂಬೆಲರುಗಳೊಡನೆ ಸರಸವಾಡಿ ನಿಶ್ಚಿಂತ ಶಾಂತಿಯಲಿ ತಲ್ಲೀನವಾಗಿತ್ತು.

ತನ್ನಿರವಿಗೆ ತಾನೆ ಮಾರುವೋಗಿತ್ತು. ಮನದಲಿ ಮಹದಾಕಾಂಕ್ಷೆಯ ನೆಳಲೂ ಸುಳಿದಿರಲಿಲ್ಲ.

ಗಿರಿಕಂದರಗಳನೇರಿಳಿಯುತ ನೀನಲ್ಲಿಗೈತಂದೆ, ಓ ನನ್ನ ಪ್ರೇಮ ವನ ವಿಹಾರಿ!

ಅಲ್ಲಿ ಪರ್ವತವಿತ್ತು; ಅಲ್ಲಿ ಕಾನನವಿತ್ತು; ಅಲ್ಲಿ ಮಹಾನಭವಿತ್ತು; ಹೆಮ್ಮರವಿತ್ತು; ಕೇದಗೆಯಿತ್ತು; ಸಂಪಗೆಯಿತ್ತು. ಆ ಮಹಾ ಸಂಮ್ಮೇಲನದಲಿ ಕೆರೆಯ ಮೂಲೆಯ ಕೆಸರಿನಲಿ ತೇಲುವ ಕಿರುತಾವರೆ ನಿನ್ನ ಕಣ್ಣಿಗೆ ಬಿತ್ತು.

ಅಂದು ಕನಸಾಗಲೊಲ್ಲದುದು ಇಂದು ನನಸಾಗಿದೆ!

ಆ ತಾವರೆಯಿಂದು ದೇವಾಲಯದಲಿ ದೇವದೇವನ ಮುಡಿಯ ಮೇಲೆ ರಾರಾಜಿಸುತ್ತಿದೆ.

ನಿನ್ನ ದೇವಾರಾಧನೆಗಾಗಿ ಯಾವ ಯಾವ ಮೂಲೆಗಳಿಂದ ಹೂ ಕೊಯ್ದು ತರುತ್ತಿರುವೆ, ಓ ನನ್ನ ಪ್ರೇಮ ವನ ವಿಹಾರಿ?

# ೫೭. ತತ್ ತ್ವಮಸಿ!

ನಿನ್ನ ಬೆನ್ನನ್ನಿಗೋ ತಟ್ಟಿ ಚಪ್ಪರಿಸಿ ಹೇಳುತ್ತಿದೇನೆ!

ನನ್ನ ವಾಣಿಯು ಕೇಳಿ ನಿನಗೆ ಕೆಚ್ಚುದಿಸಲಿ; ನಿನ್ನಾತ್ಮದಲಿ ನೆಚ್ಚುದಿಸಲಿ:

ಕೊರಗುತಿಹೆ ಏಕೆ? ಬ್ರಹ್ಮಾಂಡವೆಲ್ಲವೂ ನಿನಗಾಗಿರೆ, ಅಮೃತಾತ್ಮ ನೀನಾಗಿರೆ, ಕೊರಗುತಿಹೆ ಏಕೆ?

ಎದ್ದೇಳು! ನಿನ್ನ ಮಹಿಮೆಯ ನೀನು ಕಾಣು! ಎದೆಯ ಮಬ್ಬಳಿಯಲಿ; ಕಾಂತಿ ಕಣ್ಣಿಗೆ ಬರಲಿ; ಶಾಂತಿಯಾನಂದಗಳ ಕಡಲು ಮೇರೆ ವರಿಯಲಿ.

ನೋಡಲ್ಲಿ! ನಿನಗಾಗಿ ಹೊಳೆಯುತಿದೆ ತರಣಿ;

ನಿನಗಾಗಿ ತರಣಿಯನು ಸುತ್ತುತಿದೆ ಧರಣಿ;

ಗಾಳಿ ಬೀಸುತಿದೆ; ಬೆಂಕಿಯುರಿಯುತಿದೆ; ಚೈತ್ರಾದಿ ಮಾಸಗಳೂ ವಸಂತಾದಿ ಋತುಗಳೂ ದಿವಾರಾತ್ರಿಗಳೂ ನಿನಗಾಗಿ ಅನವರತವೂ ವಿಶ್ರಾಂತಿಯಿಲ್ಲದೆ ದುಡಿಯುತ್ತಿವೆ.

ನಿನಗಾಗಿ ನಿದ್ದೆಯಿಲ್ಲದೆ ಕಾಲದೇಶಗಳೆಚ್ಚತ್ತು ಜಾಗರಣೆ ಮಾಡುತ್ತಿವೆ.

ನಿನಗಾಗಿ ದೂರದಾಕಾಶದಾನಂತ್ಯದಲಿ ಕೋಟಿತಾರೆಗಳೆಲ್ಲ ಅನಾದಿಕಾಲದಿಂದಲೂ ಯಾತ್ರೆಗೈಯುತ್ತಿವೆ;

ನಿನ್ನ ಕ್ರೀಡೆಗೆ ಉದ್ಯಾನಗಳ ರಚಿಸಲೆಂದು ಜ್ಯೋತಿವತ್ಸರ ದೂರದಾಚೆಯಲಿ ಮಹಾ ನೀಹಾರಿಕೆಗಳೆಲ್ಲ ಸಂಮ್ಮೇಲಗೈದು ಕಠೋರ ತಪೋತಾಪದಲಿ ತೊಳಲಿ ಬಳಲುತ್ತಿವೆ.

ಯುಗಯುಗಾಂತರಗಳು ಪೊರೆದಿಹವು ನಿನ್ನನು ತಮ್ಮ ಗಬ್ಬದಲಿ ಬೈತಿಟ್ಟು;

ಎಲ್ಲ ನಕ್ಷತ್ರಗಳ ಅಗ್ನಿಸ್ಪರ್ಶವೂ ನಿನಗಾಗಿದೆ;

ಅಗ್ನಿರೂಪಿಣಿ ಪೃಥ್ವೀಮಾತೆ ಸುಂದರ ವಸುಂಧರೆಯಾಗಿಹಳು ನಿನಗಾಗಿ;

ಜಡದಿಂದ ಚೈತನ್ಯ ಚಿಮ್ಮಿದುದು ನಿನಗಾಗಿ;

ಧರೆಯಾದಿಕಾಲದಲಿ ಬೆಂಕಿಯಾವಿಗಳಿಂದ ನೀರು ನೆಲ ಗಾಳಿಗಳು ಮೂಡಿದುದು ನಿನಗಾಗಿ;

ಸಸ್ಯಗಳು ಹುಟ್ಟಿದುದು ನಿನಗಾಗಿ;

ವ್ಯಾಳಾದಿ ಮಹಾಪ್ರಾಣಿಗಳು ಲಕ್ಷಾಂತರ ವರ್ಷ ಪರ್ಯಂತ ಪೃಥ್ವಿಯನ್ನಾಳಿದುದೂ ನಿನಗಾಗಿ!

ನಿನ್ನನವುಗಳು ಮೋವಿನಲಿ ಮೆಲುಕಿಟ್ಟು ಕಾಪಾಡಿವೆ!

ಎನಿತು ಪೀಠಿಕೆಗಳಾಗಿವೆ ನಿನಗೆ! ಎನಿತು ನಾಂದಿಗಳಾಗಿವೆ ನಿನಗೆ!

ಎದ್ದೇಳು! ನಿನ್ನ ಮಹಿಮೆಯ ನೀನು ಕಾಣು! ತತ್ ತ್ವಮಸಿ! ತತ್ತ್ವಮಸಿ! ತತ್ತ್ವಮಸಿ!

# ೫೮. ಜ್ಯೋತಿರ್ಮೂರ್ತಿ

ಈ ಶಾರದ ಪ್ರಾತಃಕಾಲದಲಿ ನಿನ್ನ ಮಂದಹಾಸದ ಮನೋಹರ ಕಾಂತಿ ಎನಿತು ಸ್ವರ್ಗೀಯ ಸುಂದರವಾಗಿ ಜಗವನೆಲ್ಲ ಹಬ್ಬಿ ತಬ್ಬಿದೆ!

ಉಣ್ಣೆಯಂದದ ಬೆಣ್ಣೆಮುಗಿಲು ಮುತ್ತಿದ ಗಿರಿಯ ನೆತ್ತಿ ನೊರೆ ನೊರೆಯೆದ್ದ ನೀರಿನಲಿ ಮೀಯಲೆಂದು ಮುಳುಗಿರುವ ಮದ್ದಾನೆಯ ನೈತುದಿಯಂತಿದೆ!

ಹುಲ್ಲು ಹಸನಾಗಿ ಹಬ್ಬಿ ಹುಲುಸಾಗಿ ಬೆಳೆದಿರುವ ಹಸುರು ಬಯಲಿನಲಿ ಬಿಳಿಯ ಪುಡಿ ಮುತ್ತುಗಳನು ದಟ್ಟವಾಗೆರಚಿದಂತಿರುವ ಹಿಮಮಣಿ ರಾಶಿಯ ನಡುನಡುವೆ, ಅಲ್ಲಲ್ಲಿ, ರನ್ನದ ಕಿರುಹಣತೆಗಳಿಗೆ ಬಣ್ಣದೆಣ್ಣೆಯನು ಹಾಕಿ ಚಿನ್ನದ ಬೆಳ್ಳಿಯ ಪಚ್ಚೆಯ ನೀಲಿಯ ಬತ್ತಿಗಳನಿಟ್ಟು, ಕಾಮನ ಬಿಲ್ಲಿನ ಬೆಂಕಿಯನು ಹೊತ್ತಿಸಿದ ಕಿರು ಸೊಡರುಗಳಂದದಲಿ, ಹುಲ್ಲೆಸಳುಗಳಗ್ರದಲಿ, ಎಳನೇಸರ ಕದಿರುಗಳಲಿ, ಮೆಲ್ಲೆಲರ ತೀಟದಲಿ ಕಿರಿಯುರಿಗಳಂತೆ ನಲಿನಲಿದು ಮಿರುಮಿರುಗುವ ಹಿರಿಹನಿಗಳಿಂದ ಶರತ್ಕಾಲದಲಿ ಕಾರ್ತಿಕದ ದೀಪಾವಳಿ ಮಹೋತ್ಸವವಾಗುತ್ತಿದೆ!

ಬಣ್ಣನೆಗಸದಳವಾಗಿ ಬಣ್ಣದುರಿಯುರಿದು ಕಣ್ಣಸೆಳೆಯುವ ಓ ಸಣ್ಣ ಹನಿಯೆ, ನಿನ್ನೊಳಿರುವಂತೆಯೆ ನನ್ನೊಳೂ ಜ್ಯೋತಿ ಅಂತರ್ಯಾಮಿಯಾಗಿ ನಾನೂ ನಿನ್ನಂತೆ ತಳತಳಿಸಲಿ!

ಶಾಶ್ವತ ಮಹಾ ಪರ್ವತಗಳು ಚೂರುಚೂರಾಗಿ ಲಯಹೊಂದಿದ ಮೇಲೆ ನಶ್ವರ ಕ್ಷುದ್ರ ಹಿಮಮಣಿಗಳು ಚಿರವಾಗಿ ಮಿರುಗುವ ಕಾಲವೈ ತರುತ್ತದೆ!

# ೫೯. ಸಮರ್ಪಣ

ನಿನ್ನ ಹಣೆ ನೀಲಿಯಾಗಸದಂತೆ ಬಿತ್ತರ ;
ಹುಬ್ಬು ಬಿದಿಗೆಯ ಎಳೆವೆರೆಯಂತೆ ಮನೋಹರ ;
ಕಣ್ಣು ಕದ್ದಿಂಗಳ ತಾರಗೆ ;
ಮುಂಗುರುಳು ಕಾರಿರುಳಿನ ಕಗ್ಗತ್ತಲೆಯಂತೆ ರಾಶಿರಾಶಿಯಾಗಿ ಬೆಳ್ದಿಂಗಳಂದದ ಮುದ್ದು ಮೊಗವನು ಮುತ್ತಿದೆ ;
ಕೆಂದೊಂಡೆಯ ಹಣ್ಣಿನಂತಿರುವ ನಿನ್ನ ಚೆಂದುಟಿ ಕಿರುಜೇನಿನ ಹಿನಿಹಲ್ಲೆಯಂತೆ ಮೃದು, ಮಧುರ, ಸುಂದರ.
ನಿನ್ನ ಕೆನ್ನೆಗಳಲ್ಲಿ ಸಗ್ಗಸೊಗ ಹೆಪ್ಪುಗಟ್ಟಿ ನಿಂತಿದೆ.
ನೀನು ಹುಣ್ಣಿಮೆಯಿರುಳ ಹೊಂಗನಸು ;
ಕದ್ದಿಂಗಳ ಮುದ್ದು ನಿದ್ದೆ.
ನಿನ್ನನೆನಿತು ಮುದ್ದಿಸಿದರೂ ನನಗೆ ತಣಿವಿಲ್ಲ.
ನಿನ್ನನೆನಿತು ಬಿಗಿಯಪ್ಪಿದರೂ ನನಗೆ ದಣಿವಿಲ್ಲ.
ನೀನೆನ್ನ ಚಿನ್ನ, ರನ್ನ, ಸ್ವಾಮಿ, ಸ್ವರ್ಗ, ದೇವರು ;
ನನ್ನ ಸರ್ವಸ್ವವು ನೀನೆ!
ನೀನೆನ್ನ ರಾಧೆ, ಕೃಷ್ಣ, ಪ್ರೇಮ, ಪ್ರಾಣ ;
ನನ್ನ ಜೀವದ ಜೀವ!
ನಾನಿಲ್ಲ, ನಾನಿಲ್ಲ!
ನೀನೆ ಇರುವುದೆಲ್ಲ, ಓ ನನ್ನ ನಲ್ಲ!

# ೬೦. ಹಾರೈಕೆ

ವಜ್ರವನಾಗಿಸು ಈ ಇದ್ದಲಿನ ಚೂರನು
ನಿನ್ನಡಿಯ ವಿದ್ಯುತ್ ಸ್ಪರ್ಶದಿಂದ,
ಓ ಜಗದ್ಗುರುವೆ :
ವಜ್ರಾಯುಧವಾಗಿ ಇಂದ್ರಹಸ್ತವ ಸೇರಿ
ಆಸುರೀ ದಮನ ದಲನಕೆ ನಿವೇದಿತವಾಗಲಿ !

ಬೆಂಕಿಯನೆಚ್ಚರಿಸು ಈ ಬಣಗು ಕಟ್ಟಿಗೆಯಲ್ಲಿ
ನಿನ್ನ ಚಿದಗ್ನಿಯಾಲಿಂಗನದಿಂದ,
ಓ ಅಗ್ನಿಮೂರ್ತಿ :
ಪುರುಷೋತ್ತಮನವತಾರದ ಕೈಯ ವಿಭೂತಿಯಾಗಿ
ಈ ಕೊಳ್ಳಿಯೆ ತಮೋಕಾನನಕೆ ದವಾಗ್ನಿಯಾಗಲಿ !

ಪದ್ಮವನುದ್ಭವಿಸು ಈ ಕೆರೆಯ ಕೆಸರಿನಲಿ
ನಿನ್ನ ಪದಚುಂಬನ ಪವಾಡದಿಂದ,
ಓ ಋತಚಿನ್ಮಯೀ ಜಗನ್ಮಾತೆ :
ದೇವ ಪೂಜಿತವಾಗಿ ಅದು ದೇವದೇವನ ವರದ ಕರದ
ಕೃಪಾನಿಕೇತನವಾಗಲಿ !



# ಕನ್ನಡ ಕಾವ್ಯಮಾಲೆ

ಬೆಳೆಯುತ್ತಿರುವ ಕನ್ನಡ ಗ್ರಂಥಮಾಲೆ. ಕಥೆ, ಕವಿತೆ, ಮಹಾಕಾವ್ಯ, ಕಾದಂಬರಿ, ನಾಟಕ, ಚಿತ್ರ, ಪ್ರಬಂಧ, ವಿಮರ್ಶೆ, ಭಾಷಣ ಇತ್ಯಾದಿಯಾದ ಬಹುವಿಧದ ಕೃತಿಗಳನ್ನೊಳಗೊಂಡ ಕಾವ್ಯಮಾಲೆ. ಪ್ರಕಟನೆಗಳು ಸಾಮಾನ್ಯವಾಗಿ ಕ್ರೌನ್ ಅಷ್ಟಪತ್ರದ ಆಕಾರದಲ್ಲಿವೆ. ಇದುವರೆಗೆ ಪ್ರಕಟವಾಗಿರುವ ಗ್ರಂಥಗಳು—

**ಕುವೆಂಪು—**

೧. ಕಥನ ಕವನಗಳು ೧ ೮
೨. ಸಂನ್ಯಾಸಿ ಮತ್ತು ಇತರ ಕಥೆಗಳು ೧ ೪
೩. ಚಿತ್ರಾಂಗದಾ (ಮಹಾಕಾವ್ಯ) ೧ ೮
೪-೧೧. ಕಾನೂರು ಸುಬ್ಬಮ್ಮ ಹೆಗ್ಗಡಿತಿ ೮ ೮
೧೨. ನನ್ನ ದೇವರು, ಇತರ ಕಥೆಗಳು ೧ ೪

**ಪು. ತಿ. ನರಸಿಂಹಾಚಾರ್—**

೧೩. ಅಹಲ್ಯೆ (ಗೀತರೂಪಕ) ೧-೧೨

**ಕುವೆಂಪು—**

೧೪. ಮೂರು ನಾಟಕಗಳು ೧-೧೨

**ತೀ. ನಂ. ಶ್ರೀಕಂಠಯ್ಯ—**

೧೫. ರಾಕ್ಷಸನ ಮುದ್ರಿಕೆ (ನಾಟಕ) ೧ ೪

**ಗೊರೂರು ರಾಮಸ್ವಾಮಿ ಐಯಂಗಾರ್—**

೧೬. ಹಳ್ಳಿಯ ಬಾಳು (ಚಿತ್ರಗಳು) ೧ ೮

**ಪು. ತಿ. ನರಸಿಂಹಾಚಾರ್—**

೧೭. ದೋಣಿಯ ಬಿನದ ಮತ್ತು ಕವಿ ೧ ೦
೧೮. ರಾಮಾಚಾರಿಯ ನೆನಪು (ಚಿತ್ರ) ೧ ೪
೧೯. ಶಾರದಯಾಮಿನಿ (ಕವಿತಾಸಂಗ್ರಹ) ೧ ೦

**ಕುವೆಂಪು—**

೨೦. ಸಾಹಿತ್ಯಪ್ರಚಾರ, ಭಾಷಣಗಳು ೧ ೪
೨೧. ನಿರಂಕುಶಮತಿಗಳಾಗಿ ೦-೧೨
೨೨. ಕೊಳಲು (ಕವಿತಾ ಸಂಗ್ರಹ) ೧ ೮
೨೩. ಮಲೆನಾಡಿನ ಚಿತ್ರಗಳು ೧-೧೨
೨೪. ಪಾಂಚಜನ್ಯ (ರುದ್ರ ಕವನಗಳು) ೧ ೪
೨೫. ಕೋಗಿಲೆ ಮತ್ತು ಸೋವಿಯಟ್ ರಷ್ಯಾ (ಕವಿತೆಗಳು) ೧ ೦

**ಎಸ್. ವಿ. ರಂಗಣ್ಣ—**

೨೬. ಶೈಲಿ ೨ ೦

**ಆನಂದ—**

೨೭. ಸ್ವಪ್ನಜೀವಿ, ಇತರ ಕಥೆಗಳು ೧ ೦

**ಪು. ತಿ. ನರಸಿಂಹಾಚಾರ್**

೨೮. ಗೋಕುಲ ನಿರ್ಗಮನ (ನಾಟಕ) ೧ ೦

**ಕುವೆಂಪು—**

೨೯. ರಕ್ತಾಕ್ಷಿ (ನಾಟಕ) ೧-೧೨

**ಪು. ತಿ. ನರಸಿಂಹಾಚಾರ್—**

೩೦. ರಥಸಪ್ತಮಿ, ಇತರ ಚಿತ್ರಗಳು ೧ ೦

**ಎ. ಎನ್. ಮೂರ್ತಿರಾವ್—**

೩೧. ಆಷಾಢಭೂತಿ ೧ ೦
೩೨. ಹಗಲುಗನಸುಗಳು ೧ ೪